ಡಾ. ಮಂಜುನಾಥ ಬೇವಿನಕಟ್ಟಿ

# ಮಾತಂಗಿ



# ಮಾತಂಗಿ

ಡಾ. ಮಂಜುನಾಥ ಬೇವಿನಕಟ್ಟಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**MATANGI** - By Dr. Manjunatha Bevinakatti, Published by The Director, Kannada University, Hampi, Vidyaranya, Kamalapura-583 221. First Impression 1996, Rs. 2-00, Pages: 2+24

**ಮಂಟಪ ಮಾಲೆ: ೨೫**



**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೨೧

**ಡಿ.ಟಿ.ಪಿ. ಸಂಯೋಜನೆ :**
ಸಂಧ್ಯಾ ಗ್ರಾಫಿಕ್ಸ್,
ಬಿ.ಡಿ.ಸಿ.ಸಿ. ಕಾಲೋನಿ,
ಮೃತ್ಯುಂಜಯ ನಗರ,
ಹೊಸಪೇಟೆ-583 203.



**ಬೆಲೆ: ೨-೦೦**

**ಮುದ್ರಣ:**
**ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್**
**ಬೆಂಗಳೂರು** - 78

## ಪರಿವಿಡಿ

# ಮಾತಂಗಿ

## ೧. ಹಿನ್ನೆಲೆ :

ಆದಿಮ ಮಾನವನು ನಿಸರ್ಗದೊಂದಿಗೆ ಸಂಘರ್ಷಕ್ಕೆ ಬಿದ್ದಾಗ ಮಾಂತ್ರಿಕಾಚರಣೆಗಳ ಉಗಮವಾಯಿತು. ತಾನು ಜಯಿಸಬೇಕಾಗಿದೆ ಎಂದುಕೊಂಡ ನಿಸರ್ಗದ ಶಕ್ತಿಗಳನ್ನು ಮಣಿಸಲು ಹಾಗೂ ಒಲಿಸಿಕೊಳ್ಳಲು ಮಾನವನ ಆರಂಭಿಕ ತರ್ಕ ಏನೇನು ಹಾದಿಗಳನ್ನು ಸೂಚಿಸಿತೋ ಅವೆಲ್ಲವೂ ಆಚರಣೆಗಳಾಗಿ ರೂಪುಗೊಂಡವು. ಇಂತಹ ಆಚರಣೆ ಮತ್ತು ನಂಬಿಕೆಯ ಮೂಲಕವೇ ದೈವಗಳ ಬಗೆಗಿನ ಪರಿಕಲ್ಪನೆ ಬೆಳೆದು ಬಂದಿತು. ದೈವಗಳ ಬಗೆಗಿನ ಪರಿಕಲ್ಪನೆ, ಮನುಷ್ಯನ ಮನಸ್ಸಿನಲ್ಲಿ ಯಾವಾಗ ಪ್ರಾರಂಭವಾಯಿತೆಂಬುದು ಮುಖ್ಯವಾದ ಸಂಗತಿ. ಈ ದೈವಗಳ ಹುಟ್ಟಿಗೆ ಮನುಷ್ಯನಲ್ಲಿದ್ದ ಭಯವೇ ಮೂಲಕಾರಣವಾಗಿದೆ. ಆದಿಮಾನವನಿಗೆ ಪ್ರಕೃತಿಯ ಬದಲಾವಣೆಗಳು ಆಶ್ಚರ್ಯವನ್ನುಂಟು ಮಾಡಿರಬೇಕು. ಗುಡುಗು, ಮಿಂಚು, ಹರಿಯುವ ನೀರು, ಸುಡುವ ಬೆಂಕಿ ಇವೇ ಮೊದಲಾದ ಪ್ರಕೃತಿಯ ಚಮತ್ಕಾರಗಳು ಆದಿಮಾನವನಿಗೆ ಭಯವನ್ನುಂಟುಮಾಡಿರಬೇಕು. ಇಂತಹ ಪ್ರಕೃತಿಯ ವಿಕೋಪಗಳಿಂದ ಪಾರಾಗಲು ಆತ ಪ್ರಕೃತಿಯಲ್ಲಿಯ ಮರ, ಗಿಡಗಳನ್ನು, ನೆಲ - ಜಲವನ್ನು, ಸೂರ್ಯ, ಚಂದ್ರರನ್ನು ದೈವವೆಂದು ಪೂಜಿಸಿರಬೇಕು. ಈ ಹಿನ್ನೆಲೆಯಲ್ಲಿ ನೋಡಿದರೆ ಮಾನವನ ಹುಟ್ಟಿನಿಂದಲೇ ದೈವಗಳ ಬಗೆಗಿನ ಪರಿಕಲ್ಪನೆ ಪ್ರಾರಂಭವಾಗಿದೆ ಯೆನ್ನಬಹುದು.

ಪ್ರಕೃತಿಯಲ್ಲಿ ನಡೆಯುವ ಎಲ್ಲ ಘಟನೆಗಳಿಗೆ ಯಾವುದೋ ಒಂದು ಅವ್ಯಕ್ತ ಶಕ್ತಿ ಕಾರಣವಿರಬೇಕೆಂದು ನಂಬಿದ್ದ ಮನುಷ್ಯ, ಆ ಶಕ್ತಿಯನ್ನೇ ದೈವವೆಂದು ತಿಳಿದು ಪೂಜಿಸತೊಡಗಿದ. ಹೀಗೆ ವ್ಯಕ್ತಿಯಿಂದ - ವ್ಯಕ್ತಿಗೆ, ಸಮುದಾಯದಿಂದ - ಸಮುದಾಯಕ್ಕೆ ದೈವಗಳ ಗ್ರಹಿಕೆಯಲ್ಲಿ ಭಿನ್ನತೆ ಕಾಣಿಸಿದ್ದರಿಂದ ಭಿನ್ನ - ಭಿನ್ನ ಹೆಸರಿನ ದೈವಗಳು ಹುಟ್ಟಲು ಕಾರಣವಾಗಿದೆ. ದ್ರಾವಿಡ ಸಂಸ್ಕೃತಿಯಲ್ಲಿ ಸ್ತ್ರೀ ದೈವಗಳೇ ಪ್ರಧಾನವಾದರೆ, ಆರ್ಯ ಸಂಸ್ಕೃತಿಯಲ್ಲಿ ಪುರುಷ ದೈವಗಳೇ ಪ್ರಧಾನವಾಗಿವೆ. ಭಾರತಕ್ಕೆ ಬಂದು ನೆಲೆಸಿರುವ ಇತರ ಸಮುದಾಯಗಳಲ್ಲಿ ಕೂಡ ಪುರುಷ ದೈವಗಳೇ ಪ್ರಧಾನವಾಗಿವೆ. ಮನುಷ್ಯನ ಭಕ್ತಿಗಳಿಂದ ಕೆಲವು ದೈವಗಳು ಹುಟ್ಟಿದರೆ, ಆತನ ಮೂಢನಂಬಿಕೆ ಹಾಗೂ ಅಂಧ ಸಂಪ್ರದಾಯಗಳಿಂದ ಕೆಲವು ದೈವಗಳು ಹುಟ್ಟಿಕೊಂಡಿವೆ. ಅರ್ನಸ್ಟ್ ಹೆಕಲ್ ರವರು ಹೇಳಿರುವಂತೆ "ಧಾರ್ಮಿಕ ನಂಬಿಕೆ ಯಾವಾಗಲೂ ಅದ್ಭುತಗಳೊಂದಿಗೆ ಹೊಂದಿಕೆಯುಳ್ಳದ್ದಾಗಿರುತ್ತದೆ. ಆದ್ದರಿಂದ ದೇವರ ಕಲ್ಪನೆ ಪ್ರಕೃತಿ ವಿರೋಧಿ ಹಾಗೂ ಅಲೌಕಿಕದೊಂದಿಗೆ ಹೊಂದಾಣಿಕೆಯುಳ್ಳದ್ದಾಗಿರುತ್ತದೆ. ಧರ್ಮ ಮತ್ತು ಮೂಢನಂಬಿಕೆ ಪ್ರಕೃತಿ ನಿಯಮಗಳನ್ನು ವಿರೋಧಿಸಿ ಬದುಕಲಿಚ್ಛಿಸುತ್ತವೆಯಾದ್ದರಿಂದ ಅವು ವಿಚಾರಹೀನವಾಗಿವೆ".

(ಸಬರದ; ೧೯೯೪-೬). ಹೀಗೆ ದೈವಗಳ ಪರಿಕಲ್ಪನೆಗೆ ಸಂಬಂಧಿಸಿದಂತೆ ಬೇರೆ ಬೇರೆ ಅಭಿಪ್ರಾಯಗಳನ್ನು ಕಾಣಬಹುದು.

ಸ್ಥೂಲವಾಗಿ ನೋಡಿದರೆ ಜನಪದ ದೈವಗಳು ದ್ರಾವಿಡ ಸಂಸ್ಕೃತಿಯ ಪ್ರತೀಕವಾಗಿದ್ದರೆ; ಶಿಷ್ಟದೈವಗಳು ಆರ್ಯ ಸಂಸ್ಕೃತಿಯ ಪ್ರತಿಬಿಂಬವಾಗಿವೆ. ದ್ರಾವಿಡ ಸಂಸ್ಕೃತಿಯ ಮೇಲೆ ಆರ್ಯ ಸಂಸ್ಕೃತಿಯ ಪ್ರಭಾವ, ಆರ್ಯ ಸಂಸ್ಕೃತಿಯ ಮೇಲೆ ದ್ರಾವಿಡ ಸಂಸ್ಕೃತಿಯ ಪ್ರಭಾವ ಆಗುತ್ತಲೇ ಬಂದಿದೆ. ಹಾಗೆಯೇ ಜನಪದ ದೈವಗಳ ಪ್ರಭಾವ ಶಿಷ್ಟ ದೈವಗಳ ಮೇಲೆ ಮತ್ತು ಶಿಷ್ಟದೈವಗಳ ಪ್ರಭಾವ ಜನಪದ ದೈವಗಳ ಮೇಲೆ ಉಂಟಾಗಿದೆ. "ಇವುಗಳು ಸಂಸ್ಕೃತಿ - ಸಂಸ್ಕೃತಿಗಳ ನಡುವೆ ನಡೆಯುವ ಸಂಘರ್ಷ ಅಥವಾ ಸಮನ್ವಯದ ಮೂಲಕ ಏರ್ಪಡುವಂತಹದ್ದು. ಹೀಗೆ ಮನುಷ್ಯ ಮನುಷ್ಯರ ನಡುವೆಯೇ ಸಂಘರ್ಷ ಏರ್ಪಟ್ಟಾಗ, ಒಂದು ಸಮುದಾಯದೊಳಗೇ ಬೇರೆ ಬೇರೆ ಪಂಗಡಗಳು ಮೇಲ್‌ಗೈ ಸಾಧಿಸಲು ನಡೆಸುವ ಪ್ರಯತ್ನದೊಂದಿಗೆ ಧರ್ಮ ಉಗಮವಾಯಿತು" ಎನ್ನುತ್ತಾರೆ ದಿ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ. ನಾವು ಮಾಂತ್ರಿಕಾಚರಣೆಯನ್ನು ಪರಿಶೀಲಿಸಲಿ, ಧಾರ್ಮಿಕಾಚರಣೆಗಳನ್ನು ವಿಶ್ಲೇಷಿಸಲಿ, ಈ ಸಂಘರ್ಷದ ಅಂಶವನ್ನು ಮರೆತು ಬಿಡುವಂತಿಲ್ಲ. ಪ್ರಸ್ತುತ ಅವು ನಮ್ಮ ಕಣ್ಣೆದುರಿಗಿರುವಾಗ ಬೇಕಾದಷ್ಟು ಸಂಕೀರ್ಣಗೊಂಡಿರಬಹುದು, ರೂಪಾಂತರ ಹೊಂದಿರಬಹುದು. ಆದರೆ ಅವುಗಳ ಉಗಮದ ಅಧ್ಯಯನದಲ್ಲಿ ಈ ಮೂಲ ಪ್ರೇರಣೆಗಳ ಎಳೆಗಳನ್ನಂತೂ ಹಿಡಿಯಬಹುದು. ಅವು ಇನ್ನೂ ಉಳಿದುಕೊಂಡು ಬಂದಿರುವ ಸಂದರ್ಭದಲ್ಲಿ ಹಳೆಯ ಜೀವನ ಪರಿಸ್ಥಿತಿಗಳ ಪ್ರಜ್ಞೆಯ ವಿಕಾಸದ ಪಳೆಯುಳಿಕೆಗಳನ್ನು ಅರ್ಥಮಾಡಿಕೊಳ್ಳಬಹುದು.

ಭಾರತೀಯ ಸಮಾಜವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಬೇಕೆಂದು ಬಯಸುವವರಿಗೆ ದೊರೆಯುವ ಒಂದು ದೊಡ್ಡ ಆಕರ ಈ ಸಾಂಸ್ಕೃತಿಕಾಚರಣೆಗಳೇ. ಗ್ರಾಮೀಣ ಜನರ ಆಚರಣೆ, ನಂಬಿಕೆಗಳನ್ನು ಕೇವಲ ಮೌಢ್ಯವೆಂದೋ, ಕಂದಾಚಾರವೆಂದೋ ನಿರ್ಲಕ್ಷಿಸುವ ಧೋರಣೆ ಬಹಳ ಕಾಲದವರೆಗೆ ಇತ್ತು. ಪ್ರತಿಸಾಂಸ್ಕೃತಿಕಾಚರಣೆ ರೂಪುಗೊಳ್ಳಲು ಅದಕ್ಕೆ ತಳಹದಿಯಾಗಿ ಅದರ ಉಗಮದಲ್ಲಿ ಒಂದು ಭೌತಿಕಾವಶ್ಯಕತೆಯಿತ್ತು ಎಂಬ ನಿಲವು ಹೆಚ್ಚು ಪ್ರಚಲಿತಗೊಂಡಂತೆಲ್ಲಾ ಅದರ ಬಗೆಗಿನ ಅಧ್ಯಯನಕ್ಕೆ ತುಂಬಾ ಮಹತ್ವವೊದಗಿದೆ. ಇಂತಹ ಒಂದು ಸಮಗ್ರ ಗ್ರಹಿಕೆಯೊಂದಿಗೆ ಈ ಎಲ್ಲಾ ಅಂಶಗಳನ್ನು ಪರಿಶೀಲಿಸುವ ಕೆಲಸವಾಗಬೇಕಾಗಿದೆ.

## ೨. 'ಮಾತಂಗಿ' ಪರಿಕಲ್ಪನೆ:

ಮಾತಂಗಿ ಮಾದಿಗರ ದೈವ. ಮಾದಿಗರು ತೊಗಲಿನ ಕೆಲಸ ಮಾಡುವ ಕುಶಲಕರ್ಮಿಗಳು. ಮಾದಿಗರು ತಾವು ಮಾತಂಗಿಯ ಮಕ್ಕಳೆಂದು ಹೇಳಿಕೊಳ್ಳುತ್ತಾರೆ. ಮಾತಂಗಿಯನ್ನು ಪರಶುರಾಮ ಸೋಲಿಸಿದಾಗ ಅವಳು ಮಾದಿಗನೊಬ್ಬನ ಮನೆಯ ಚರ್ಮ ಹದಮಾಡುವ ಕರಿಬಾನಿಯ ಕೆಳಗೆ ಅವನಿಂದ ತಪ್ಪಿಸಿಕೊಳ್ಳಲು ಅವಿತುಕೊಂಡಳಂತೆ. ಹಬ್ಬದ ದಿನ ಮಾದಿಗರು ತಮ್ಮ ಅಂತಹ ಕರಿಬಾನಿಗಳನ್ನು ಮಾತಂಗಿಯ ಪ್ರತಿನಿಧಿಗಳೆಂದು ಪೂಜಿಸುತ್ತಾರೆ. ಮಾಂಸ ಹೆಂಡಗಳನ್ನು ಅವಳಿಗೆ ನೈವೇದ್ಯ ಮಾಡುತ್ತಾರೆ. ಅಲ್ಲದೆ ಮದುವೆಯಾಗದ ಮಾದಿಗರ ಹುಡುಗಿಯರಲ್ಲಿ ಒಬ್ಬಳನ್ನು ಮಾತಂಗಿಯನ್ನಾಗಿ ಆರಿಸುವ ವಿಧಿ ಸಹ ಇದೆ.

ಮಾತಂಗಿಯನ್ನು ಮಾತಂಗಿ, ಮಾತಂಗೆವ್ವ, ಮಾತೆಂಗಮ್ಮ, ದೋಣಿ ಮಾತಂಗಿ, ಮಾತಂಗ ಕನ್ಯೆ ಎಂಬ ಹೆಸರುಗಳಿಂದ ಕರೆಯುತ್ತಾರೆ. ಪ್ರತಿಯೊಂದು ಊರಿನ ಮಾದರ ಕೇರಿಯಲ್ಲಿ ಮಾತಂಗಿ ಇದ್ದೇ ಇರುತ್ತಾಳೆ. ನೆಲದಲ್ಲಿ ಹೂತ ಬಾನಿಗಳು ಅಥವಾ ಮಣ್ಣಿನ ಕೊಡಗಳು ಅಥವಾ ಮಣ್ಣಿನ ಮಡಿಕೆಯ ಆಕಾರದ ಎರಡು ಬಾನಿಗಳಿದ್ದು ಅವಕ್ಕೆ ಶಿಖರಾಕಾರದ ಕುಡಿಕೆಗಳಿರುತ್ತವೆ. ಅಥವಾ ಮುಖವಾಡಗಳು ಅಥವಾ ಜಗ(ಅಡ್ಡಿಗೆ)ದಲ್ಲಿ ಬೆಳ್ಳಿಯ ಮುಖವನ್ನು ಇಟ್ಟ ಪ್ರತಿಮೆಗಳು ಮುಂತಾದವುಗಳನ್ನು ಮಾತಂಗಿಯ ರೂಪವೆಂದು ಕರೆಯಲಾಗುತ್ತದೆ. ಮಾತಂಗಿಯನ್ನು ಸಾಮಾನ್ಯವಾಗಿ ಮಾದರ ಕೇರಿಯಲ್ಲಿ ಇರುವ ಕಟ್ಟೆಯ ಮೇಲೆ ಪ್ರತಿಷ್ಠಾಪಿಸುತ್ತಾರೆ. ಕೆಲವೆಡೆ ಮಾತಂಗಿಗೆ ಪ್ರತ್ಯೇಕವಾದ ಗುಡಿಗಳನ್ನು ಸಹ ಕಟ್ಟಿರುತ್ತಾರೆ.

**ಮಾತಂಗಿ ಎನ್ನುವ ಪದಕ್ಕೆ ವಿವಿಧ ಅರ್ಥಕೋಶಗಳಲ್ಲಿ ಇರುವ ಅರ್ಥಗಳು ಹೀಗಿವೆ:**

೨.೧. ಮಾತಂಗಿ = ಹೆಣ್ಣುದೇವತೆ, ಹೊಲತಿ (ಪಂಡಿತ. ಚೆ.ಎ. ಕವಲಿ; ೧೯೪೯; ೭೩೨).

೨.೨. ಮಾತಂಗಿ = ಚಂಡಾಲರ ದೇವತೆ, ದುರ್ಗೆ, ಒಂದು ಮಹಾವಿದ್ಯೆ, ಕಶ್ಯಪನ ಓರ್ವಕನ್ಯೆ (ಗುರುನಾಥ ಜೋಶಿ; ೧೯೯೧. ೬೩೮).

೨.೩. ಮಾತಂಗಿ = ಕಿರಾತಕಿ, ಚಾಂಡಾಲತಿ, ಹೆಣ್ಣಾನೆ (ಕ.ವೆಂ.ರಾಜಗೋಪಾಲ ಮತ್ತು ಕೇಶವಭಟ್ಟ; ೧೯೭೦. ೨೧೧).

೨.೪. ಮಾತಂಗಿ = The Deity of Chandala (Rev. J. Bucher; ೧೯೯೧. ೩೯೩).

೨.೫. ಮಾತಂಗಿ = A Chandala Women (Rev. F. Kittel; ೧೯೯೧.೧೨೩೫).

೨.೬. ಮಾತಂಗಿ = ೧. ಚಾಂಡಾಲ ಕನ್ಯೆ; ಮಾದಗಿತ್ತಿ.

ಕಮಲಭವಂ ಇದನವೆಂ ಮೊದಲೊಳ್ ಮಾತಂಗಿಯೆಂದು ತಾಂ ಮುಟ್ಟದೆ

ಮಾಡಿದ ನಕ್ಕುಂಕಯ್ಯೊಳ್ ಮುಟ್ಟಿದೊಡಿಂತಗ್ಗಳಿಸಿತ್ತೋರ್ಕುಮೇ ಲಾವಣ್ಯಂ
(ಕಾದಂಪೂ: ೫೦).

ಮಾತಂಗಿಯನತಿಶೋಕಾನ್ವಿತೆಯಂ..... ಇದಿರೊಳೆಕಂಡಂ
(ಸುಕುಮಾ; ೪-೫೬).

ವ್ಯಾಸಬೋಯಿತಿಯ ಮಗ ಮಾರ್ಕಂಡೇಯ ಮಾತಂಗಿಯ ಮಗ
(ಬಸಪು: ೫೬೦).

೨. ಬೇಡತಿ; ಶಬರಿ
ಮಾತಂಗಿಯೊಲೆ ಪಸಲೆಯುಂ ಪಾದರ್ದನೆ ನಿಡುಬಯಸಿ, ನಿಡುಸುಯ್ದುರಿರ್ವರುವೊಂದುಗೂಡಿ (ಶ್ರೀರಾಮ; ೨೬೮ - ೧೩೯).

೩. ಒಬ್ಬ ಕ್ಷುದ್ರ ದೇವತೆಯ ಹೆಸರು ಬಿಲ್ಲಿಯಾ ಮಹಾಕೆಂಚೆ ಮಾತಂಗಿ. ಬಕ್ಕಾಯಿ ಎಲ್ಲ ನಾನಾ ಕದಾಕಳ್ಳ ದೇವತೆಗಳ ನಿಲ್ಲದೆ ಒಲಿಸಿದರು
(ವಿಸಾಸು; ೫೮-೨).

೪. ದುರ್ಗೆ; ಪಾರ್ವತಿ: ಶಾಕ್ತೇಯರು.... ಮಾತಂಗಿಯ ಭಕ್ತೆಯರಾಗಿದ್ದರು
(ಸಂಶೋತ : ೨೪೮).

೫. (ಜೈನ) ಹತ್ತು ಮಹಾವಿದ್ಯೆಗಳಲ್ಲಿ ಒಂದು
ಮಾತಂಗಿ ಗೌರಿ....
ಭ್ರಾಮರಿ ಆಭೋಗಿನಿಮೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತ ವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಪು. : ೧೯೬).

## ೩. ಮಾತಂಗಿಯ ಆಯ್ಕೆ ಹಾಗೂ ಮಾತಂಗಿತನಕ್ಕೆ ಒಪ್ಪಿಸುವ ವಿಧಿ ವಿಧಾನಗಳು:

ಮಾತಂಗಿಯನ್ನು ಆರಿಸುವಾಗ ತುಂಬ ಎಚ್ಚರಿಕೆಯಿಂದ ಆಯ್ಕೆ ನಡೆಸುತ್ತಾರೆ. ಹಿಂದೆ ಮಾತಂಗಿಯಾಗಿದ್ದವಳ ವಂಶದವರಿಗೆ ಪ್ರಾಶಸ್ತ್ಯ ಇರುತ್ತಿತ್ತು. ಅವಳು ಅನೇಕ ಪವಾಡ ಭವಿಷ್ಯಗಳನ್ನು ಹೇಳಿ ತನ್ನ ಮಹತ್ವವನ್ನು ಸಿದ್ಧಪಡಿಸಿ ತೋರಿಸಬೇಕಿತ್ತು. "ಅವಳ ಆಯ್ಕೆ ಒಪ್ಪಿತವಾದಾಗ ಅವಳು ಮುಖಕ್ಕೆ ಕುಂಕುಮ ಅರಿಶಿಣಗಳನ್ನು ಧಾರಾಳವಾಗಿ ಬಳಿದುಕೊಂಡು, ಬೇವಿನ ಎಲೆಗಳನ್ನು ತನ್ನ ಸುತ್ತ ಕಟ್ಟಿಕೊಳ್ಳುತ್ತಾಳೆ. ಅವಳು ಅವಿವಾಹಿತಳಾಗಿರಬೇಕು. ಆದರೆ ಕನ್ಯೆಯಾಗಿಯೇ ಇರಬೇಕೆಂಬ ಕಡ್ಡಾಯವಿಲ್ಲ" (ಕಂಬಾರ (ಸಂ); ೧೯೮೫-೧೫೪೯).

ಮಾತಂಗಿತನಕ್ಕೆ ಹೆಂಗಸನ್ನು ಒಪ್ಪಿಸುವ ಸಮಾರಂಭದಲ್ಲಿ ಒಕ್ಕಲಿಗ ಪೂಜಾರಿ ನೇತೃತ್ವ ವಹಿಸುತ್ತಾನೆ. "ಮನೆಯ ಅಂಗಳದ ಒಂದು ಭಾಗವನ್ನು ಸಗಣಿ ಹಾಕಿ ಸಾರಿಸುತ್ತಾರೆ. ಅದರ ಮೇಲೆ ಕೆಂಪು, ಹಳದಿ, ಬಿಳಿ ರಂಗೋಲಿಯಿಂದ ಕಮಲದ ಹೂ ಬರೆಯುತ್ತಾರೆ. ಇದಕ್ಕೆ ರಾಗಿ ಅಥವಾ ಅಕ್ಕಿಯಿಂದ ಅಂಚು ಕಟ್ಟುತ್ತಾರೆ. ಈ ಚಿತ್ರದ ಮೇಲೆ ಐದು ಮಡಕೆಗಳನ್ನು, ಮಧ್ಯದಲ್ಲಿ ಒಂದು; ಮೂಲೆಗಳಲ್ಲಿ ನಾಲ್ಕು ಹೀಗೆ ಇಡುತ್ತಾರೆ. ಮಡಕೆಗಳ ಪಕ್ಕದಲ್ಲಿ ವಿಭೂತಿ ಉಂಡೆಗಳು, ಹೊಸಬಟ್ಟೆ, ಅರಿಶಿಣದ ಕೊಂಬು, ಕರ್ಪೂರ, ಬಾಳೆಹಣ್ಣು ಇಡುತ್ತಾರೆ. ನಾಲ್ಕು ಮಡಕೆಗಳ ಸುತ್ತ ಒಂದು ದಾರಸುತ್ತಿ ಮಧ್ಯದ ಮಡಕೆಗೆ ಕಟ್ಟುತ್ತಾರೆ. ಈ ಆಚರಣೆಗೆ ಹಿಂದಿನ ಐದು ದಿನಗಳೂ ಮಾತಂಗಿಯಾಗುವವಳು ಹಣ್ಣು, ಹಾಲನ್ನು ಮಾತ್ರ ಸೇವಿಸಬೇಕು. ಅವಳಿಗೆ ಬಿಳಿಸೀರೆ ಉಡಿಸಿ, ಮಧ್ಯದ ಮಡಕೆಯ ಹತ್ತಿರ ಕೂರಿಸುತ್ತಾರೆ. ಒಂದು ಬಿದಿರು ಬುಟ್ಟಿಯಲ್ಲಿ ಎಲ್ಲಮ್ಮನ ಎರಡು ಪಾದಗಳ ಮರದ ಅಥವಾ ಮಣ್ಣಿನ ಪ್ರತಿರೂಪ, ಕಬ್ಬಿಣದ ದೀಪ, ಒಂದು ಬೆತ್ತ ಇವುಗಳನ್ನಿಟ್ಟ ಮಡಕೆಯನ್ನು ಇಟ್ಟು, ಅದನ್ನು ಅವಳ ತಲೆಯ ಮೇಲೆ ಹೊರಿಸುತ್ತಾರೆ. ಆಸಾದಿ ಎಲ್ಲಮ್ಮನ ಹಾಡುಗಳನ್ನು ಹೇಳುತ್ತಾನೆ. ಒಕ್ಕಲಿಗ ಪೂಜಾರಿಯು ಅವಳ ಮೇಲೆ ಅಕ್ಕಿ ಚೆಲ್ಲಿ, ಅವಳ ಕೊರಳಿಗೆ ಎಲ್ಲಮ್ಮನ ಮತ್ತು ಪರಶುರಾಮನ ಬೊಟ್ಟುಗಳನ್ನು ಕಟ್ಟುತ್ತಾನೆ. ಹೊಸ ಮತ್ತು ಹಳೆಯ ಮಾತಂಗಿಗಳು 'ಎಕ್ಕಲ್ದೆ ಜೋಗವ್ವ' ಎಂದು ಕೂಗುತ್ತಾರೆ. ಮಾತಂಗಿಯರು, ಆಸಾದಿಗಳು ಹೆಂಡ ಕುಡಿಯುವುದರೊಂದಿಗೆ ಸಮಾರಂಭ ಮುಗಿಯುತ್ತದೆ". (ಕಂಭಾರ (ಸಂ); ೧೯೮೫-೧೫೫೦).

## ೪. ಮಾತಂಗಿ ಸಂಪ್ರದಾಯ:

ಈಗಲೂ ಮಾದಿಗರ ಹೆಣ್ಣುಮಕ್ಕಳು ಮದುವೆಯಾಗದೆ ಮುತ್ತು ಕಟ್ಟಿಸಿಕೊಂಡು ಮಾತಂಗಿಯರಾಗುವ ಸಂಪ್ರದಾಯ ಉಳಿದುಕೊಂಡಿದೆ. ಚರ್ಮ ಹದ ಹಾಕುವ ಬಾನಿಯ ಮುಂದೆ ಈ ಸಂಪ್ರದಾಯಕ್ಕೊಳಗಾಗುತ್ತಾರೆ. ಆ ಸಮಯದಲ್ಲಿ ಹಾಡುವ ಹಾಡುಗಳೆಲ್ಲ ಎಲ್ಲಮ್ಮನಿಗೆ ಸಂಬಂಧಿಸಿದವುಗಳಾಗಿವೆ. ಮಾತಂಗಿಯು ವಿವಿಧ ವಸ್ತುಗಳನ್ನು ಬುಟ್ಟಿ(ಹಡ್ಲಿಗೆ)ಯಲ್ಲಿ ಹಾಕಿಕೊಂಡು ಅದನ್ನು ಮತ್ತು ಬೇವಿನ ಎಲೆಗಳನ್ನು ತಲೆಯ ಮೇಲೆ ಹೊರುತ್ತಾಳೆ. ಬುಟ್ಟಿಗೆ ಕೆಂಪು ಅಥವಾ ಕಂದು ಬಣ್ಣದ ಬಟ್ಟೆ ಸುತ್ತಲಾಗಿರುತ್ತದೆ. ಬುಟ್ಟಿಯನ್ನು ಮಾತಂಗಿಯಾದವಳ ಮನೆಯಲ್ಲಿ ಹಗ್ಗದಿಂದ ನೇತುಹಾಕಿರುತ್ತಾರೆ.

ಮಾತಂಗಿ ಎಲ್ಲ ಹಬ್ಬಗಳಲ್ಲಿ ಮುಂಚಿನ ಶುದ್ಧೀಕರಣ ಆಚರಣೆಗಳ ನೇತೃತ್ವ ವಹಿಸಿ ಕೊಳ್ಳುತ್ತಾಳೆ. ಮಾಲಕ್ಷ್ಮಿ, ಪೋಲೇರಮ್ಮ ಅಂಕಮ್ಮ ಅಥವಾ ಇನ್ನಾವುದಾದರೂ ಹಳ್ಳಿಯ ದೇವತೆಯ ಹಬ್ಬ ಬಂದರೆ ಮಾತಂಗಿ ಅಲ್ಲಿಗೆ ಬರುತ್ತಾಳೆ. ಅವಳ ಕವಡೆ ಹಾರವನ್ನು ಮೂರು ದಿನಗಳವರೆಗೆ ಬಾವಿಯಲ್ಲಿ ಇಡಲಾಗುತ್ತದೆ. ಅನಂತರ ಹಬ್ಬದ ದಿನ ಅವಳು ಅದನ್ನು ಧರಿಸುತ್ತಾಳೆ. ಭಾವಿಯ ತಳದಲ್ಲಿ ಇಟ್ಟಿದ್ದ ಚಾಕು, ಮರದ ಚಪ್ಪಲಿ ಮತ್ತು ತ್ರಿಶೂಲಗಳನ್ನು ಕೈಯಲ್ಲಿ ಹಿಡಿದು ಹಬ್ಬದ ನೇತಾರನ ಹಿಂದೆ ಹೊರಡುತ್ತಾಳೆ. ಹಬ್ಬದ ಯಜಮಾನನ ಬಂಧುಗಳೆಲ್ಲ ಸಾಲಾಗಿ ನಿಲ್ಲುತ್ತಾರೆ. ಮಾತಂಗಿ ಅವರ ಸುತ್ತ ಓಡಾಡಿ ಏನೇನೋ ಅರ್ಥವಿಲ್ಲದ ಮಾತುಗಳನ್ನು ಆಡುತ್ತಾ, ಅವರ ಮೇಲೆ ಉಗಿಯುತ್ತಾ ತನ್ನ ದಂಡದಿಂದ ಅವರನ್ನು ಮುಟ್ಟುತ್ತಾಳೆ. ಅವಳ ಸ್ಪರ್ಶ ಮತ್ತು ಎಂಜಲುಗಳು ದೇಹದ ಮತ್ತು ಆತ್ಮದ ಅಶುದ್ಧತೆಯನ್ನು ಹೋಗಲಾಡಿಸುತ್ತದೆಂಬ ನಂಬಿಕೆಯಿದೆ. ಆ ದಿನ ಮಾತಂಗಿ ನೆರೆದ ಜನರಿಗೆ ಬೈದು ಅವರ ಮೇಲೆ ಉಗಿಯುತ್ತಾಳೆ. ಇದನ್ನು ಅವರು ಕೆಟ್ಟದೆಂದು ಭಾವಿಸುವುದಿಲ್ಲ. ಅದು ಮೈಲಿಗೆ ಕಳೆಯುತ್ತದೆ ಎಂದು ನಂಬುತ್ತಾರೆ. ಅವಳು ಮಾತಂಗಿಯ ಅವತಾರವೇ ಎಂದು ನಂಬುತ್ತಾರೆ. ಉನ್ನತ ವರ್ಗದ ರೆಡ್ಡಿಗಳೂ, ಧನಿಕ ಕೋಮಟಿಗಳೂ ತಮ್ಮ ದೇಹ ಮತ್ತು ಆತ್ಮಗಳ ಶುದ್ಧತೆಗಾಗಿ ಮಾತಂಗಿಯನ್ನೇ ನಂಬುತ್ತಾರೆ. ಕೆಲವು ಬ್ರಾಹ್ಮಣ ಕುಟುಂಬಗಳೂ ಮಾತಂಗಿಯನ್ನು ಕರೆದು ಸತ್ಕರಿಸುತ್ತಾರೆ. ಮಾತಂಗಿಯಾದವಳು ಅಂಗಳದೊಳಗೆ ಬರಬಹುದು. ಅಂಗಳದಲ್ಲಿ ಒಂದು ಜಾಗವನ್ನು ಅವಳು ಸಗಣಿಯಿಂದ ಸಾರಿಸಿ ಅದರ ಮೇಲೆ ಒಂದು ಬುಟ್ಟಿಯನ್ನು ಇಡುತ್ತಾಳೆ. ಅದರೊಳಗೆ ಮಾಡಿದ ಅಡಿಗೆಯನ್ನೆಲ್ಲಾ ಹಾಕುತ್ತಾರೆ. ಬುಟ್ಟಿಯ ಮೇಲ್ಭಾಗದಲ್ಲಿ ಅಕ್ಕಿ ಹಿಟ್ಟು ಹರಡಿ ಅದರ ಮೇಲೆ ಸಣ್ಣ ದೀಪ ಹಚ್ಚುತ್ತಾರೆ. ನಂತರ ಅವಳು ಮಡಕೆ ಹಿಡಿದು ಅದರೊಳಗೆ ಕಳ್ಳು ತುಂಬಲು ಕೋರುತ್ತಾಳೆ. ಬ್ರಾಹ್ಮಣ ಅದಕ್ಕೆ ನೀರು ಮಾತ್ರ ತುಂಬುತ್ತಾನೆ. ಸಾಕು ಎಂದು ಹೇಳುತ್ತಾನೆ. ನಂತರ ಮಡಕೆಯನ್ನು ಕೈಯಲ್ಲಿ ಹಿಡಿದು ಅವಳು ಜೋರಾಗಿ ಹಾಡುತ್ತಾ ಅಲ್ಲಿ ನೆರೆದ ಗಂಡಸರು ಹೆಂಗಸರ ಸುತ್ತ ಓಡಾಡುತ್ತಾ ಮಡಕೆಯ ನೀರನ್ನು ಕೈಯಿಂದ ತೆಗೆದು ಅವರ ಮೇಲೆಲ್ಲಾ ಚಿಮುಕಿಸುತ್ತಿರುತ್ತಾಳೆ. ಬ್ರಾಹ್ಮಣರು, ಕ್ಷತ್ರಿಯರು, ಸಂತರು, ರಾಜರು ಇವರೆಲ್ಲರಿಂದ ತನಗೆ ಉಂಟಾದ ಅಪಮಾನವನ್ನು

ಅವಳು ನೆನೆದುಕೊಂಡು ಹಾಡುತ್ತಾಳೆ. ಹೆಂಗಸರು ಆದಿನ ತಾವು ತೊಟ್ಟ ಒಳಲಂಗಗಳನ್ನು ಮಾತಂಗಿಗೆ ಕೊಟ್ಟು ಬಿಡುತ್ತಾರೆ. ಮನೆಯ ಒಡತಿ ತಾನು ಉಟ್ಟ ಸೀರೆಯನ್ನು ಅವಳಿಗೆ ಕೊಡುತ್ತಾಳೆ. ಬ್ರಾಹ್ಮಣ ಗಂಡಸರು ತಾವು ತೊಟ್ಟಿರುವ ಜನಿವಾರವನ್ನು ತೆಗೆದು ಸ್ನಾನಮಾಡಿ ಬೇರೆ ಜನಿವಾರ ಧರಿಸುತ್ತಾರೆ.

## ೫. ನಂಬಿಕೆ ಮತ್ತು ವಿಧಿ - ನಿಷೇಧಗಳು:

೫.೧ ಮಾತಂಗಿಯಾದ ಹೆಣ್ಣುಮಗಳು ಹಬ್ಬದ ದಿನ ಜನರಿಗೆ ಬೈಯ್ದರೆ ಮತ್ತು ಅವರ ಮೇಲೆ ಉಗುಳಿದರೆ ಒಳ್ಳೆಯದೆಂದು ಭಾವಿಸುತ್ತಾರೆ. ಅಲ್ಲದೆ ಮೈಲಿಗೆ ಕಳೆಯುತ್ತದೆ ಎಂದು ನಂಬುತ್ತಾರೆ.

೫.೨ ಪಾಂಡುರೋಗವಿದ್ದವರು ಮಾತಂಗಿಗೆ ಹಣ್ಣುಕಾಯಿ ಮಾಡಿಸಿದರೆ ರೋಗ ವಾಸಿಯಾಗುತ್ತದಂತೆ.

೫.೩ ಚರ್ಮರೋಗವಿದ್ದವರು ಕರಿಬಾನಿಯ ನೀರಿನಲ್ಲಿ ಮೈ ತೊಳೆದುಕೊಂಡರೆ ನಿವಾರಣೆ ಆಗುತ್ತದಂತೆ.

೫.೪ ಗಾಯವಾದರೆ ಕರಿಬಾನಿಯ ನೀರನ್ನು ಸಿಂಪಡಿಸಿಕೊಂಡರೆ ವಾಸಿಯಾಗುತ್ತದಂತೆ.

೫.೫ ಕೆಲವು ಕಡೆ ದೇವತೆಯನ್ನು ಕಣಿ ಕೇಳುತ್ತಾರೆ. ಆಗ ದೇವತೆ ಹೇಳಿದ್ದು ನಿಜವಾಗುತ್ತದಂತೆ.

೫.೬ ಮಾತಂಗಿಗೆ ಕುರಿ ಕೋಳಿಗಳ ಬಲಿಗಳನ್ನು ಕೊಡುತ್ತಾರೆ.

೫.೭ ಮಂಗಳವಾರ ಮತ್ತು ಶುಕ್ರವಾರಗಳನ್ನು ಮಾತಂಗಿಯ ವಾರಗಳೆಂದು ನಂಬುತ್ತಾರೆ.

೫.೮ ಮದುವೆಯಾದಾಗ ಮಾತಂಗಿಗೆ ಉಡಿತುಂಬಿ ನಮಸ್ಕರಿಸಿದರೆ ಒಳ್ಳೆಯದಾಗುತ್ತದೆಂಬ ನಂಬುಗೆ.

೫.೯ ಕೆಲವು ಊರುಗಳಲ್ಲಿ ಮಾತಂಗಿ ಬಾನಿಯ ಹತ್ತಿರ ಹೆಂಗಸರು ಹೋದರೆ ಕೆಟ್ಟದಾಗುತ್ತದಂತೆ. ಹಾಗಾಗಿ ಮಾತಂಗಿ ಬಾನಿಯ ಹತ್ತಿರ ಹೆಂಗಸರು ಹೋಗುವುದು ನಿಷಿದ್ಧ.

೫.೧೦ ಕೆಲವೆಡೆ ಮಾತಂಗಿಗೆ ಮಕ್ಕಳ ಮೊದಲ ಜವುಳ ತೆಗೆಸಿದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಯಿದೆ.

೫.೧೧ ಮೇಲ್ಜಾತಿಯವರು ತಮ್ಮ ಮನೆಯ ಮದುವೆಗಳಲ್ಲಿ ಮೌನವಾಗಿ ಮಾತಂಗಿ ಬಾನಿಯ ಹತ್ತಿರ ಬಂದು ಬಾನಿಯ ನೀರನ್ನು ತೆಗೆದುಕೊಂಡು ಹೋಗಿ ಹಂದರದ ಕಂಬಕ್ಕೆ ಕಟ್ಟುವ ಪದ್ಧತಿ ಇದೆ.

೫.೧೨ ಕೆಲವು ಕಡೆ ಮಾತಂಗಿ ಬಾನಿಯ ನೀರನ್ನು ಅಮವಾಸ್ಯೆಯಂದು ಮನೆಗೆ ತಂದು ಜಂತಿಗೆ ಕಟ್ಟುವ ಪದ್ಧತಿ ಇದೆ.

೫.೧೩ ಕೆಲವು ಕಡೆ ಹೆರಿಗೆಯ ಸಂದರ್ಭದಲ್ಲಿ ಮಾತಂಗಿ ಬಾನಿಯ ನೀರನ್ನು ಮನೆಯ ಸುತ್ತಲೂ ಸಿಂಪಡಿಸುವ ಪದ್ಧತಿ ಇದೆ.

೫.೧೪ ಮಾತಂಗಿ ಉಳಿದ ಬಾನಿಯನ್ನು ಈಗಲೂ ಹಬ್ಬಗಳಲ್ಲಿ ಮಾದಿಗರು ಹೆಂಡ, ಕೋಳಿ, ಮಾಂಸಗಳಿಂದ ಪೂಜಿಸುವ ಪದ್ಧತಿ ಇದೆ.

೫.೧೫ ರಾತ್ರಿ ನೀರಡಿಕೆಯಾದಾಗ ನೀರು ಕುಡಿಯದೇ ಮಲಗಿದರೆ ನಮ್ಮ ಆತ್ಮ ಮಾದಿಗರ ಕರಿಬಾನಿಯಲ್ಲಿ ನೀರು ಕುಡಿದು ಬರುತ್ತದಂತೆ.

೫.೧೬ ದನಕರುಗಳಿಗೆ ರೋಗ ರುಜಿನಗಳು ಬಂದಾಗ ಮಾತಂಗಿಗೆ ಬೇಡಿಕೊಂಡರೆ ವಾಸಿ ಮಾಡುತ್ತಾಳಂತೆ.

## ೬. ಮಾತಂಗಿಯ ಹಿನ್ನೆಲೆಗಿರುವ ಕಥೆಗಳು:

ಮಾತಂಗಿಯ ಬಗ್ಗೆ ಜನಪದರು ತಮ್ಮದೇ ಆದ ನಂಬಿಕೆ, ಆಚರಣೆ, ಸಂಪ್ರದಾಯ ಮತ್ತು ವಿಧಿ ನಿಷಿದ್ಧಗಳನ್ನು ಹೊಂದಿರುವಂತೆ ಕಥೆಗಳನ್ನು ಸಹ ಹೊಂದಿದ್ದಾರೆ. ಮಾತಂಗಿಯು ಎಲ್ಲಮ್ಮ, ರೇಣುಕೆ, ಹುಲಿಗೆಮ್ಮ ಮತ್ತು ಗುತ್ತೆಮ್ಮ ಮುಂತಾದ ಶಕ್ತಿದೈವಗಳೊಂದಿಗೆ ಸಂಬಂಧ ಹೊಂದಿರುವ ಕಥೆಗಳು ಬಹಳಷ್ಟು ಸಿಗುತ್ತಿವೆ. ಜನಪದರ ಕಥೆಗಳಲ್ಲಿ ಸಾಮಾನ್ಯವಾಗಿ ಮಾತಂಗಿ ಶಕ್ತಿದೈವಗಳಿಗೆ ಸಹಾಯ ಮಾಡುವುದು ಮತ್ತು ಆ ಮುಖಾಂತರ ಒಂದಿಲ್ಲೊಂದು ತೊಂದರೆಗೊಳಗಾಗುವುದನ್ನು ಕಾಣಬಹುದು. ಮಾತಂಗಿಯ ಬಗೆಗೆ ಜನಪದರು ಹೊಂದಿರುವ ಕಥೆಗಳು ಈ ಕೆಳಗಿನಂತಿವೆ.

೬.೧. ಸವದತ್ತಿ ಎಲ್ಲಮ್ಮನಿಗೆ ಗಂಡ ಜಮದಗ್ನಿ ಚರ್ಮರೋಗ ಬರಲಿ ಎಂದು ಶಾಪಕೊಟ್ಟು, ಗುಣವಾಗಲು ಮಾದರ ಮನೆಯ ಮಾತಂಗಿಯ ಚರ್ಮದ ದೋಣಿ ನೀರನ್ನು ತೊಳೆದುಕೊಳ್ಳು ಎಂದನಂತೆ. ಎಲ್ಲಮ್ಮ ಹಾಗೆ ಮಾಡಿ ತನ್ನ ಚರ್ಮರೋಗವನ್ನು ನಿವಾರಿಸಿಕೊಂಡಳು. ಮತ್ತು 'ನನ್ನ ರೋಗ ನಿನ್ನಿಂದ ನಿವಾರಣೆಯಾಯಿತು. ನನಗೆ ಪೂಜೆಸಲ್ಲಿಸುವುದಕ್ಕಿಂತ ಮೊದಲು ನಿನಗೆ ಸಲ್ಲಲಿ, ನಿನ್ನ ದೋಣಿಯ ನೀರನ್ನು ಸೇವಿಸಲಿ' ಎಂದು ಮಾತಂಗಿಗೆ ಹರಕೆಯಿತ್ತಳು. ಅಂದಿನಿಂದ ಮಾದರ ಕೇರಿಯ ದೋಣಿ ಮಾತಂಗಿಯಾಯಿತಂತೆ.

೬.೨. ಜಮದಗ್ನಿ ಋಷಿಯು ಮರಣಹೊಂದಿದ ಮೇಲೆ ರೇಣುಕೆಯು ಪತಿಯ ಮೃತ ದೇಹದೊಡನೆ ಕಿಚ್ಚುಹೋಗಿ ಸ್ವರ್ಗವೇರಬೇಕೆಂದು ನಿರ್ಧರಿಸಿದಳು. ಧಗಧಗಿಸುವ ಚಿತೆಯ ಮೇಲೆ ಮಲಗಿದಳು. ಆ ವೇಳೆಗೆ ಮೋಡಕವಿದು ಕಾರ್ಗತ್ತಲೆಯಾಯಿತು. ಸ್ಮಶಾನಕ್ಕೆ ಬಂದವರು ಆಶ್ರಮಕ್ಕೆ ತೆರಳಿದರು. ಧಾರಾಕಾರ ವೃಷ್ಟಿಯಾಗಿ ಬೆಂಕಿಯು ಸತಿಯ ಸೀರೆಯನ್ನು ತಗಲುವ ಮುನ್ನವೇ ಆರಿಹೋಯಿತು. ರೇಣುಕೆಯು ಚಿತೆಯಿಂದಿಳಿದು ದಿಗಂಬರಳಾಗಿ ನಿಂತಿರಲು, ಮಳೆಯೂ ನಿಂತು ಬೆಳಗಾಯಿತು. ಮಾನವನ್ನು ರಕ್ಷಿಸಿಕೊಳ್ಳಲು ಬೇವಿನೆಲೆಯ ಸೀರೆ ಯನ್ನುಟ್ಟು ಅಡ್ಡಾಡುತ್ತಿರಲು ಅಲ್ಲಿಗೆ ಬಂದ ಮಾತಂಗಿ, ಮಾವುರಾಣಿ ಎಂಬ ಮತಂಗ ಕನ್ಯೆಯರು ರೇಣುಕೆಯನ್ನು ಆದರದಿಂದ ಮನೆಗೆ ಕರೆದುಕೊಂಡು ಹೋಗಿ ರಕ್ಷಿಸಿದರು (ಜೋಯಿಸ; ೧೯೯೫ : ೩೬೨).

೬.೩. ಹಲವಾರು ವರ್ಷಗಳಿಂದ ಒಂದು ಊರಿನಲ್ಲಿ ಮಳೆಬೆಳೆ ಇರಲಿಲ್ಲ. ಆಗ ಒಬ್ಬ ಒಕ್ಕಲಿಗ ಈ ವರ್ಷ ಮಳೆ ಬೆಳೆ ಬರುವಂತೆ ಮಾಡಿದರೆ ಒಂದು ಪಡಿ ಜೋಳವನ್ನು ಎಲ್ಲಮ್ಮನಿಗೆ ಕೊಡುವೆ ಎಂದು ಬೇಡಿಕೊಂಡ. ಆಗ ಎಲ್ಲಮ್ಮನ ಕೃಪೆಯಿಂದಾಗಿ ಆ ವರ್ಷ ಮಳೆ ಬೆಳೆ ಚೆನ್ನಾಗಿ ಆಯಿತು. ಆದರೆ ಒಕ್ಕಲಿಗ ತನ್ನ ಹರಕೆಯನ್ನು ಮರೆತುಬಿಟ್ಟ. ಈತನನ್ನು ಪರೀಕ್ಷಿಸಲು ಎಲ್ಲಮ್ಮ ಸಾಮಾನ್ಯ ವೇಷವನ್ನು ಧರಿಸಿಕೊಂಡು, ಕಣಕ್ಕೆ ಹೋಗಿ ಭಿಕ್ಷೆಯನ್ನು ಬೇಡಿದಳು. ಆಕೆ ಅವನ ಹೊಲಕ್ಕೆ ಹೋಗಿ ಬದನೆಕಾಯಿ, ಈರುಳ್ಳಿ, ಹಸಿ ಮೆಣಸಿನಕಾಯಿ ಹರಿದುಕೊಂಡಳು. ಇದನ್ನು ನೋಡಿದ ಒಕ್ಕಲಿಗ ಎಲ್ಲಮ್ಮನನ್ನು ಬೆನ್ನಟ್ಟಿದ. ಎಲ್ಲಮ್ಮ

ಓಡುತ್ತ ಸಮೀಪದಲ್ಲಿದ್ದ ಮಾದರ ಮಾತಂಗಿಯ ಮನೆಯನ್ನು ಹೊಕ್ಕಳು. ತಾನಲ್ಲಿರುವುದನ್ನು ಯಾರಿಗೂ ತಿಳಿಸಬಾರದು ಎಂದು ಕೇಳಿಕೊಂಡಳು. ಒಕ್ಕಲಿಗ ಬಂದು 'ಆ ಕಳ್ಳಿಯನ್ನು ಎಲ್ಲಿ ಮುಚ್ಚಿಕೊಂಡಿರುವೆ' ಎಂದು ಮಾತಂಗಿಯನ್ನು ಹೊಡೆದ. ಆಗ ಎಲ್ಲಮ್ಮ ಹೊರಗೆ ಬಂದು 'ನಿರಪರಾಧಿಗೆ ಹೊಡೆದವರಿಗೆ ರೋಗಬರಲಿ; ನನಗೆ ಆಶ್ರಯ ಕೊಟ್ಟವರಿಗೆ ನನ್ನ ಪೂಜೆಗಿಂತ ಮೊದಲು ಪೂಜೆ ನಡೆಯಲಿ' ಎಂದು ಆಶೀರ್ವಾದ ಮಾಡಿದಳು (ಆರ್. ಎಸ್. ಹಿರೇಮಠ; ೧೯೮೭ : ೬೨).

೬.೪. ಹುಲಿಗೆಯ ಹುಲಿಗೆಮ್ಮ ತಾನು ಕೆಲಸ ಮಾಡುತ್ತಿದ್ದ ತೋಟದಿಂದ ಈರುಳ್ಳಿ, ಬದನೆಕಾಯಿ, ಮೆಣಸಿನಕಾಯಿಯನ್ನು ಕದಿಯುತ್ತಾಳೆ. ಕದ್ದ ಮಾಲನ್ನು ತನ್ನ ಶಿಷ್ಯೆ ಮಾತಂಗಿಯ ಮನೆಯಲ್ಲಿ ಬಚ್ಚಿಡುತ್ತಾಳೆ. ಗೌಡ ಶಾನುಭೋಗರು ತನಿಖೆ ಮಾಡಿದಾಗ ಮಾತಂಗಿ ಸಿಕ್ಕಿಬಿದ್ದಳು. ಅವಳಿಗೆ ಶಿಕ್ಷೆಯಾಗಿ ಮೂಗು ಕೊಯ್ಯುತ್ತಾರೆ. ಇಂದಿಗೂ ಹುಲಿಗಿಯ ಮಾತಂಗಿಯ ವಿಗ್ರಹಕ್ಕೆ ಮೂಗಿಲ್ಲ (ಸಿದ್ಧಲಿಂಗಯ್ಯ; ೧೯೯೦ : ೧೦೩).

೬.೫. ಜೋಗತಿಯರು ರೇಣುಕಾದೇವಿಯ ಸ್ತುತಿಗೆ ಮಾತಂಗಿಯನ್ನು ಪೂಜಿಸುವ ಬಗೆಗೆ ಇರುವ ಮತ್ತೊಂದು ದಂತಕಥೆ ಈ ರೀತಿ ಇದೆ: ಒಮ್ಮೆ ರೇಣುಕಾಧೇವಿಯು ಒಬ್ಬ ತೋಟಿಗನನ್ನು ಪರೀಕ್ಷಿಸುವುದಕ್ಕಾಗಿ ಒಬ್ಬ ಮುದುಕಿಯ ವೇಷದಿಂದ ಅವನ ತೋಟಕ್ಕೆ ಹೋಗುತ್ತಾಳೆ. ಅವನು ಆ ಮುದುಕಿಯನ್ನು ಕಳ್ಳಿ ಎಂದು ಭಾವಿಸಿ ಬೆನ್ನಟ್ಟುತ್ತಾನೆ. ಆಗ ರೇಣುಕಾದೇವಿಯು ಚರ್ಮಗಾರರ ಮಾತಂಗಿಯಿಂದ ರಕ್ಷಣೆ ಪಡೆಯುತ್ತಾಳೆ. ತಮ್ಮ ರೇಣುಕೆಗೆ ಆಶ್ರಯ ನೀಡಿದ ಮಾತಂಗಿಯು ಅವರಿಗೆ ಪೂಜ್ಯಳಾಗುತ್ತಾಳೆ. ಆದ್ದರಿಂದ ಇಂದಿಗೂ ಜೋಗತಿಯರು ರೇಣುಕಾದೇವಿಯ ಪೂಜೆ ಮಾಡುವಾಗ ಮಾತಂಗಿಯನ್ನು ಪೂಜಿಸುತ್ತಾರೆ. ಅಲ್ಲದೆ ಪ್ರತಿಯೊಬ್ಬ ಸ್ತ್ರೀಯು ಜೋಗತಿತನದ ದೀಕ್ಷೆ ತೆಗೆದುಕೊಳ್ಳುವ ಮೊದಲು ಚರ್ಮ ಹದ ಮಾಡುವವರ ಮನೆಗೆ ಹೋಗಿ ಮಾತಂಗಿ ಕಟ್ಟೆಯ ನೀರಿನಿಂದ ಪರಿಶುದ್ಧವಾಗುತ್ತಾಳೆ. ಮತ್ತು ಐದುವಾರ ಮಾತಂಗಿಯನ್ನು ಪೂಜಿಸುತ್ತಾಳೆ. ಆ ಐದು ದಿನಗಳು ಮಂಗಳವಾರ ಅಥವಾ ಶುಕ್ರವಾರ ಆಗಿರಬೇಕು (ಎನ್. ಕೆ. ಕಡೆತೋಟದ; ೧೯೮೩ : ೩).

೬.೬. ಒಂದು ಪಟ್ಟಣವನ್ನು ಓರುಗಲ್ಲಿನ ರಾಜ ಆಳುತ್ತಿದ್ದ. ಒಂದು ದಿನ ಈ ಪಟ್ಟಣಕ್ಕೆ ಗುತ್ತೆಮ್ಮ ಎಂಬ ಹೆಂಗಸು ಭಿಕ್ಷೆ ಬೇಡುತ್ತ ಬಂದು ರಾಜನ ತೋಟವನ್ನು ಹೊಕ್ಕು ಹಾಳು ಮಾಡಿ ಮಾತಂಗೆವ್ವನ ಹತ್ತಿರ ರಕ್ಷಣೆ ಕೇಳಿದಳು. ಮಾತಂಗೆವ್ವ ಒಂದು ಚರ್ಮಕ್ಕೆ ನೂರಾವೊಂದು ಚರ್ಮಮಾಡಿ ಗುತ್ತೆವ್ವನನ್ನು ಮರೆ ಮಾಡಿದಳು. ರಾಜ ಬಂದು ಮಾತೆಂಗಮ್ಮನೆ ತೋಟ ಹಾಳು ಮಾಡಿರುವಳೆಂದು ಭಾವಿಸಿ ಮೂಗು, ಕಿವಿಗಳನ್ನು ಕತ್ತರಿಸಿದ. ಕೆಲವು ವರ್ಷದೊಳಗೆ ಓರಗಲ್ಲ ರಾಜನ ಪಟ್ಟಣ ಹಾಳಾಯಿತು.

೬.೭.ಒಂದು ಕಥೆಯ ಪ್ರಕಾರ ಜಮದಗ್ನಿಯ ಆಜ್ಞೆಯ ಪ್ರಕಾರ ಕತ್ತರಿಸಲಾದ ಅವನ ಹೆಂಡತಿಯಾದ ರೇಣುಕೆಯ ತಲೆಯು ಮಾದಿಗನೊಬ್ಬನ ಮನೆಯಲ್ಲಿ ಬಿದ್ದು, ಅದು ಮಾದಿಗ ಹೆಂಗಸಾಗಿ ಬೆಳೆಯಿತಂತೆ (ಕಂಬಾರ (ಸಂ); ೧೯೮೫ : ೧೫೪೯).

೬.೮.ಪರಶುರಾಮ ತಂದೆಯ ಆಜ್ಞೆಯಂತೆ ತಾಯಿ ರೇಣುಕೆಯ ಶಿರಚ್ಛೇದ ಮಾಡುತ್ತಾನೆ. ತಂದೆಯನ್ನು ಪುನಃ ತಾಯಿಯನ್ನು ಉಳಿಸಿಕೊಡುವಂತೆ ವರಕೇಳುತ್ತಾನೆ. ಆಗ ಮಾಂಗ್ ಬುಡಕಟ್ಟಿಗೆ ಸೇರಿದ ಹುಡುಗಿಯೊಬ್ಬಳ ತಲೆಯನ್ನು ತಂದು ರೇಣುಕೆಗೆ ಜೋಡಿಸಿದರಂತೆ. ಅಂದಿನಿಂದ ಮಾಂಗ್ ಬುಡಕಟ್ಟಿಗೆ ರೇಣುಕೆ ಕುಲದೇವತೆಯಾದಳು. ಮಾಂಗ್ ಜನರು ಮಹಾರಾಷ್ಟ್ರದ ಪೂರ್ವಭಾಗದಲ್ಲಿ ಕಂಡು ಬರುತ್ತಾರೆ. ಇವರು ಸಮಾಜದಲ್ಲಿ ತೀರಾ ಕೆಳವರ್ಗದವರೆಂದು ಪರಿಗಣಿಸಲ್ಪಟ್ಟವರು (ಎಂ. ಬಿ. ಸಕೇತ; ೧೯೮೭ : ೧೬೫).

೬.೯.ಜಮದಗ್ನಿ ಮಾತಿನಂತೆ ಪರಶುರಾಮನಿಗೆ ರೇಣುಕಾಳನ್ನು ಜೀವಂತಗೊಳಿಸಲು ಒಪ್ಪಿ, ಆಕೆಯ ಶಿರಕ್ಕಾಗಿ ಹುಡುಕಾಡಲು, ಮಹಾ ಪರಾಕ್ರಮಿ ಪರಶುರಾಮನ ಹೊಡೆತದಿಂದಾಗಿ ಅದು ಬಹುದೂರ ಹೋಗಿ ಬೀಳುತ್ತದೆಯಾದ್ದರಿಂದ ಸಿಗುವುದೇ ಇಲ್ಲ. ಆಗ ಕೆಳಜಾತಿಗೆ ಸೇರಿದ ಸ್ತ್ರೀಯೊಬ್ಬಳು ತನ್ನ ಶಿರವನ್ನೇ ದೇವತೆಗೆ ಕೊಡಲು ಮುಂದೆ ಬರುತ್ತಾಳೆ. ಹೀಗೆ ತನ್ನ ದೇಹ, ಈ ಕೆಳಜಾತಿಗೆ ಸೇರಿದ ಸ್ತ್ರೀಯ ಶಿರವನ್ನು ಧರಿಸಿ, ರೇಣುಕಾ ಮತ್ತೆ ಜೀವಂತಗೊಳ್ಳುತ್ತಾಳೆ. ಈಕೆಯೇ ಮಹಾತಂಗಿ. ಈಕೆಯೊಡನೆ, ತನ್ನ ಮಕ್ಕಳೊಡನೆ ಜಮದಗ್ನಿ ತನ್ನ ಆಶ್ರಮದಲ್ಲಿ ವಾಸವಾಗಿದ್ದನು (ಗುರುಮೂರ್ತಿ : ೧೯೯೧ : ೨೮೬).

೬.೧೦.ಪತಿವ್ರತೆಯಾದ ರೇಣುಕೆ ತನ್ನ ಶೀಲದ ಸಾಮರ್ಥ್ಯದಿಂದ ದಿನವೂ ಮರಳಿನಲ್ಲಿ ಗಡಿಗೆಯನ್ನು ಮಾಡಿ, ಅದರಲ್ಲಿ ನದಿಯ ನೀರನ್ನು ಗಂಡನ ನಿತ್ಯ ವಿಧಿಗಳಿಗೆ ತಂದು ಕೊಡುತ್ತಿದ್ದಳು. ಒಂದು ದಿನ ವೃತ್ತಿಕಾವತಿಯ ದೊರೆ ಚಿತ್ರರಥ ತನ್ನ ಹೆಂಡತಿಯೊಂದಿಗೆ ವಿಹರಿಸುತ್ತ ಆಕಾಶದಲ್ಲಿ ಹೋಗುತ್ತಿದ್ದಾಗ, ನದಿಯಲ್ಲಿ ನೀರನ್ನು ತುಂಬಿಕೊಳ್ಳುತ್ತಿದ್ದ ರೇಣುಕೆ ನೋಡಿ ಅವರ ಸುಖಕ್ಕೆ ಅಸೂಯೆಪಟ್ಟಳು. ಒಡನೆಯೇ ಅವಳ ಶೀಲದ ಸಾಮರ್ಥ್ಯ ಮರೆಯಾಗಿಬಿಟ್ಟಿತು. ಎಂದಿನಂತೆ ಮರಳಿನಿಂದ ಗಡಿಗೆಯನ್ನು ಮಾಡಲಾಗಲಿಲ್ಲ. ಇದನ್ನು ತಿಳಿದು ಕೋಪಗೊಂಡ ಜಮದಗ್ನಿ ಅವಳನ್ನು ಕೊಲ್ಲುವಂತೆ ತನ್ನ ಐವರು ಮಕ್ಕಳಿಗೆ ಅಪ್ಪಣೆ ಮಾಡಿದನು. ಕೊನೆಯ ಮಗನಾದ ಪರಶುರಾಮನೊಬ್ಬನ ವಿನಾ ಉಳಿದವರು ತಾಯಿಯನ್ನು ಕೊಲ್ಲಲು ಒಪ್ಪಲಿಲ್ಲ. ಪರಶುರಾಮನು ಕೊಡಲಿಯೆತ್ತಿ ಹೊರಡಲು ರೇಣುಕೆ ಭಯದಿಂದ ಮತಂಗ ಜನರಿದ್ದ ವಸತಿಗೆ ಓಡಿಹೋಗಿ ಅವಿತುಕೊಂಡಳು. ಪರಶುರಾಮನು ಅವಳನ್ನು ಹಿಂಬಾಲಿಸಿ ಅಲ್ಲಿಗೇ ಹೋಗಿ ಅವಳ ತಲೆಯನ್ನು ತುಂಡರಿಸಿ ಬಂದನು. ತಂದೆಗೆ ಮಗನ ಪಿತೃವಾಕ್ಯ ಪರಿಪಾಲನಾ ದಾರ್ಢ್ಯವನ್ನು ಕಂಡು ಸಂತೋಷವಾಗಿ ವರವೊಂದನ್ನು ಕೇಳುವಂತೆ ಹೇಳಲು ಪರಶುರಾಮನು ತನ್ನ ತಾಯಿ ಬದುಕುವಂತೆ ವರಬೇಡಿದನು. ಜಮದಗ್ನಿ ಆಗಲೆಂದು ಸಮ್ಮತಿಸಿ, ಬೇರ್ಪಟ್ಟ ರುಂಡ

ಮುಂಡಗಳನ್ನು ಕೂಡಿಸಿ ಬರುವಂತೆ ಕಳುಹಿಸಿದನು. ಅಷ್ಟರಲ್ಲಿ ಮತಂಗ ಜನರ ಹೆಣ್ಣೊಬ್ಬಳು ಸತ್ತು, ಅವಳ ತಲೆಯನ್ನು ರೇಣುಕೆಯ ದೇಹದ ಬಳಿ ಇರಿಸಿದ್ದರು. ಪರಶುರಾಮನು ಬಂದು ರೇಣುಕೆಯ ದೇಹಕ್ಕೆ ಈ ಮತಂಗ ಸ್ತ್ರೀಯ ತಲೆಯನ್ನು ತಿಳಿಯದೆ ಕೂಡಿಸಿಬಿಟ್ಟನು. ದೇಹವೇನೋ ಜೀವತಳೆದು ಎದ್ದಿತು. ಆದರೆ ಎದ್ದವಳು ರೇಣುಕೆಯೆಂದು ಜಮದಗ್ನಿ ಒಪ್ಪಲಿಲ್ಲ. ಜಾತಿ ಭ್ರಷ್ಟಳಾದ ಹೆಣ್ಣು ಮತಂಗ ಜನರಲ್ಲಿಯೇ ಪೂಜೆಗೊಳ್ಳುತ್ತ ನಿಂತಳು (ಎಸ್.ಕೆ.ರಾಮಚಂದ್ರರಾವ್; ೧೯೭೫ : ೧೬೯).

೬.೧೧.ಪರಶುರಾಮ ತಂದೆಯ ಆಜ್ಞೆಯಂತೆ ಎಲ್ಲಮ್ಮನ ತಲೆ ಕಡಿದನಲ್ಲ, ಆವಾಗ ಅಲ್ಲಿಯೇ ನಿಂತಿದ್ದ ಸೇವಕಿ ಮಾತಂಗಿಯ ತಲೆಯು ಕಡಿದುಬಿತ್ತು. ಮುಂದೆ ತಂದೆಯ ವರದಿಂದ ತಾಯಿಯ ಜೀವವನ್ನು ಮರಳಿ ಪಡೆಯುವಾಗ ಪರಶುರಾಮ ಒಂದು ತಪ್ಪು ಮಾಡಿದ. ಎಲ್ಲಮ್ಮನ ತಲೆಯನ್ನು ಮಾತಂಗಿ ದೇಹದ ಮೇಲೂ, ಮಾತಂಗಿ ತಲೆಯನ್ನು ಎಲ್ಲಮ್ಮನ ದೇಹದ ಮೇಲೂ ಇಟ್ಟು ಜೀವ ಬರಿಸಿದ. ಜೀವಬಂದ ಮೇಲೆ ಎಲ್ಲಮ್ಮನ ದೇಹದ ಮೇಲಿನ ಮಾತಂಗಿಯ ರುಂಡ ತನಗೆ ಕುರಿ, ಕೋಳಿ ಬೇಕೆಂದು ಕೇಳತೊಡಗಿತು. ಮಾತಂಗಿಯ ದೇಹದ ಮೇಲಿನ ಎಲ್ಲಮ್ಮನ ರುಂಡ ತನಗೆ ಶಾಖಾಹಾರಬೇಕೆಂದು ಕೇಳತೊಡಗಿತಂತೆ (ನಂ. ನಾರಾಯಣಗೌಡ; ೧೯೭೪ : XXX).

೬.೧೨.ತುಳಜಾಪುರದ ಅಂಬಾಭವಾನಿಯೂ ಶಕ್ತಿ ದೇವತೆಯೇ. ಮಹಾರಾಷ್ಟ್ರ ಪ್ರಾಂತ್ಯದಲ್ಲಿ ಉಸ್ಮನಾಬಾದ್ ಜಿಲ್ಲೆಗೆ ಸೇರಿದ ಈ ಕ್ಷೇತ್ರದಲ್ಲಿ ಮೂರು ಅಡಿ ಎತ್ತರದ ಎಂಟು ಭುಜಗಳ ಸ್ಥಾನಿಕ ಮೂರ್ತಿ ಭವಾನಿ, ಅಂಬಾ, ತುಳಜಾ, ತುರಜಾ, ತ್ವರಿಕಾ, ತುಕಾ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿದೆ. ಇದು ಸ್ವಯಂಭು ಮೂರ್ತಿಯೆಂದು ಪ್ರತೀತಿ. ತ್ರಿಶೂಲ, ಭರ್ಜಿ, ಬಾಣ, ಶಂಖ, ಬಿಲ್ಲು, ಪಾನಪಾತ್ರೆ, ಅಸುರನ ತಲೆಮುಡಿ ಇವು ಕೈಗಳಲ್ಲಿವೆ. ಈಕೆಯ ವಾಹನವೂ ಸಿಂಹವೇ. ಬಲಗಾಲು ಮಹಿಷಾಸುರನ ಮೇಲಿದೆ. ಎಡಗಾಲು ನೆಲದ ಮೇಲಿದೆ. ಕಾಲುಗಳ ನಡುವೆ ಅಸುರನ ತಲೆಯನ್ನು ದೇವಿ ಹಿಡಿದಿದ್ದಾಳೆ. ತಲೆಯ ಮೇಲ್ಭಾಗದಲ್ಲಿ ಯೋನಿ ಲಿಂಗಗಳನ್ನೂ ಕಾಣಬಹುದು. ಮತಂಗನೆಂಬ ಅಸುರನನ್ನು ದೇವಿ ಮಾತಂಗಿಯಾಗಿಯೇ ಕೊಂದಳೆಂದು ಸ್ಥಳ ಪುರಾಣ ಹೇಳುತ್ತದೆ (ಎಸ್.ಕೆ. ರಾಮಚಂದ್ರರಾವ್; ೧೯೭೫ : ೧೭೯).

೬.೧೩. ಒಬ್ಬ ರಾಜ ಮಗಳು ಬೇಕೆಂದು ತಪಸ್ಸು ಮಾಡಿದಾಗ ದೇವತೆಗಳು ಒಂದು ಚಿನ್ನದ ಗಿಣಿಯನ್ನು ಅವನಿಗೆ ಕಳುಹಿಸಿದರಂತೆ. ಆ ಗಿಣಿ ಕೂಡಲೇ ಹುತ್ತವೊಂದನ್ನು ಹೊಕ್ಕು ಮಾಯವಾಯಿತಂತೆ. ನಿರಾಶನಾದ ರಾಜ ಹುತ್ತವನ್ನು ಅಗೆದಾಗ, ಸುಂದರವಾದ ಒಬ್ಬ ಮಗಳು ದೊರಕಿದಳಂತೆ ಇವಳೇ ಮಾತಂಗಿ ಎಂದು ಹೆಸರಾದಳು (ಕಂಬಾರ (ಸಂ); ೧೯೮೫ : ೧೫೮೯).

೬.೧೪.ಕಾರ್ತವೀರ್ಯನು ಜಮದಗ್ನಿಯನ್ನು ಕೊಂದು, ಕಾಮಧೇನುವನ್ನು ಅಪಹರಿಸುತ್ತಾನೆ. ಅವನ ಮಕ್ಕಳು ರೇಣುಕೆಯ ಮಾನವನ್ನು ಕೆಣಕುತ್ತಾರೆ. ಇದರಿಂದ ಕೋಪಗೊಂಡ ಪರಶುರಾಮ ಕಾರ್ತವೀರ್ಯನ ಮಕ್ಕಳನ್ನು ಕೊಂದುದಲ್ಲದೆ, ಎಲ್ಲಾ ಕ್ಷತ್ರಿಯರನ್ನು ಸಂಹರಿಸುವ ಪ್ರತಿಜ್ಞೆ ಮಾಡಿದನು. ಅದರಂತೆ ಸಂಹರಿಸಿ ಬಂದು, ಕ್ಷತ್ರಿಯರನ್ನು ಕೊಂದ ಪಾಪ ತೊಳೆಯಲು ತೀರ್ಥಯಾತ್ರೆಗೆ ಹೊರಡುತ್ತಾನೆ. ಹೊರಡುವ ಮುನ್ನ ಚಂದ್ರಗುತ್ತಿ ಗುಹೆಯಲ್ಲಿ ತಪಸ್ಸಿಗೆ ಕುಳಿತ ರೇಣುಕೆಯ ರಕ್ಷಣೆಗಾಗಿ ಕುರುಬರ ಜಾತಿಯಲ್ಲಿ ಹುಟ್ಟಿದವನೂ ಶೂರನೂ ಆದ ಬೀರಪ್ಪನನ್ನು ಬೆಟ್ಟದಲ್ಲಿ ಕಾವಲಿಗಿರಿಸುತ್ತಾನೆ. ಆತನ ತಾಯಿ ಮಾತಂಗಮ್ಮನೂ ರೇಣುಕೆಯ ಬಳಿ ಇರುತ್ತಾಳೆ. ಬೀರಪ್ಪ ಶೂರ ಮತ್ತು ಉಡಾಳನಾಗಿದ್ದ. ಹಾದಿಯಲ್ಲಿ ಹೋಗಿ ಬರುವ ಹೆಣ್ಣುಮಕ್ಕಳ ಮಾನ ಕಳೆದು ಬತ್ತಲೆ ಮಾಡುವುದೂ, ಗಂಡು ಮಕ್ಕಳನ್ನು ಕೆಣಕಿ ಮೋಜು ಪಡುತ್ತಿರುತ್ತಾನೆ. ಉಪಟಳಕ್ಕೆ ಅಂಜಿದ ಹೆಣ್ಣು ಗಂಡುಗಳು ಇವನ ತಾಯಿ ಮಾತಂಗಮ್ಮನಲ್ಲಿ ದೂರು ಹೇಳುತ್ತಾರೆ. ಕೆಣಕಿಸಿಕೊಂಡ ಹೆಣ್ಣು ಮಕ್ಕಳು ಬರೀ ಬೆತ್ತಲಾಗಿಯೇ ಬಂದು ದೂರಿತ್ತಾಗ, ಬೀರನ ತಾಯಿ ಕನಿಕರಗೊಂಡು ಬಂದವರಿಗೆ ಹೊಸಬಟ್ಟೆ, ಬಳೆ, ಕುಂಕುಮವಿತ್ತು ರಕ್ಷಣೆ ನೀಡುತ್ತಿದ್ದಳಂತೆ. ಮತ್ತು ತನ್ನ ಮಗನಿಗೆ ಬುದ್ಧಿ ಬರಲೆಂದು ಬೀರಪ್ಪನಿಗೆ ಮೊಟ್ಟಮೊದಲು ಈ ಬೆತ್ತಲುಸೇವೆ ಸಲ್ಲಿಸಿದಳೆಂದು ಐತಿಹ್ಯವಿದೆ (ಹನುಮಂತಪ್ಪ ; ೧೯೮೮ : ೧೧೬).

## ೭. ಸಾಂಸ್ಕೃತಿಕ ವಿಶ್ಲೇಷಣೆ:

ಪ್ರಸ್ತುತದಲ್ಲಿ ಇದುವರೆಗೂ 'ಮಾತಂಗಿ' ದೈವದ ಬಗೆಗೆ ಕೊಟ್ಟಿರುವ ಮಾಹಿತಿಗಳನ್ನು ಅಧ್ಯಯನಕ್ಕೆ ಒಳಪಡಿಸಬಹುದು. 'ಮಾತಂಗಿ'ಯ ಸಂಪ್ರದಾಯ, ನಂಬಿಕೆ, ವಿಧಿ - ನಿಷೇದಗಳು ಹಾಗೂ ಜನಪದ ಕತೆ ಮತ್ತು ಐತಿಹ್ಯಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಲೂ ಅವಕಾಶಗಳಿವೆ.

ವೈದಿಕ ದೇವತೆಗಳ ಉಗಮ ಮತ್ತು ಪ್ರಭಾವವನ್ನು ಕುರಿತು ನಾವು ತಿಳಿಯಬೇಕಾದರೆ ಪುರಾಣಗಳ ಮೊರೆ ಹೋಗುತ್ತೇವಷ್ಟೆ. ಕೆಲವು ಪ್ರತಿಷ್ಠಿತ ವೈದಿಕ ದೇವತೆಗಳಿಗಂತೂ ತಮ್ಮದೇ ಪ್ರತ್ಯೇಕ ಪುರಾಣಗಳಿವೆ. ಉದಾಹರಣೆಗೆ; ವಿಷ್ಣುಪುರಾಣ, ಶಿವಪುರಾಣ ಕಾಲಾನಂತರದಲ್ಲಿ ಪಾರ್ವತಿ ಮಹಾತ್ಮೆ ಇತ್ಯಾದಿ. ಬರಹ ಬಲ್ಲವರು ಅಂದರೆ ಸಾಮಾಜಿಕವಾಗಿ ಮೇಲ್‌ಸ್ತರದಲ್ಲಿದ್ದವರ ಆರಾಧನೆಗೆ ಒಳಗಾಗಿದ್ದ ದೇವತೆಗಳಿಗೆ ಪುರಾಣಗಳು, ಸಹಸ್ರನಾಮಾರ್ಚನೆಗಳು, ಸ್ಥಳ ಪುರಾಣಗಳು ಹುಟ್ಟಿಕೊಂಡವು. ಏಕೆಂದರೆ ಇವು ವಿಸ್ತೃತ ಜನಸಮೂಹಗಳನ್ನು ಒಳಗೊಳ್ಳುತ್ತವೆ.

ಓದು ಬರಹ ಬಲ್ಲವರಲ್ಲದ ಬದುಕಿನ ಕೋಟಲೆಗಳಲ್ಲಿ ಮುಳುಗಿಹೋದ ಜನಸಾಮಾನ್ಯರ, ಮುಗ್ಧರ, ದುಡಿದುಣ್ಣುವವರ ದೇವತೆಗಳಾಗಿ ಅವರವರ ಮನೆಗಳಿಗೆ ಹೆಚ್ಚೆಂದರೆ ಅವರ ಜಾತಿಗಳಿಗೆ ಸೀಮಿತವಾಗಿರುವ ಈ ದೇವತೆಗಳ ಬಗ್ಗೆ ಪುರಾಣಗಳು ಸೃಷ್ಟಿಯಾಗಿಲ್ಲ. ಹಾಗಾಗಿ ನಾವು ಈ ದೇವತೆಗಳ ಮೂಲ ದ್ರವ್ಯವನ್ನು ಅರಿಯಲು ಜನರಲ್ಲಿ ಬಳಕೆಯಲ್ಲಿರುವ ಆ ದೇವರ ಕುರಿತ ಕಥೆಗಳು, ನಂಬಿಕೊಂಡು ಬಂದ ಪ್ರತೀತಿಗಳು ಮತ್ತು ಆಚರಣೆಗಳಲ್ಲಿರುವ ವಿಧಿಗಳನ್ನು ಬಳಸಬೇಕಾಗುತ್ತದೆ.

ಈಗ ಮಾತಂಗಿಯ ಬಗ್ಗೆ ಇರುವ ಕಥೆಗಳನ್ನು ಈ ಹಿಂದೆ ಉಲ್ಲೇಖಿಸಲಾಗಿದೆಯಷ್ಟೆ. ಈ ಕಥೆಗಳ ಪ್ರಕಾರ ನಮಗೆ ತಿಳಿದುಬರುವುದೇನೆಂದರೆ, ಈಕೆ ಮೊದಲನೆಯದಾಗಿ ಮಾದಿಗರ ಹೆಣ್ಣುಮಗಳು. ಮತಂಗಕನ್ಯೆ ಹಾಗೂ ಮಾಂಗ್ ಬುಡಕಟ್ಟಿಗೆ ಸೇರಿದವಳು. ಹಾಗೂ ಕುರುಬರ ಬೀರಪ್ಪನ ತಾಯಿ. ಎರಡನೆಯದಾಗಿ ಮಾತಂಗಿ ಶಕ್ತಿದೇವತೆಗಳಾದ ರೇಣುಕೆ, ಎಲ್ಲಮ್ಮ, ಗುತ್ತೆವ್ವ ಹಾಗೂ ಹುಲಿಗೆಮ್ಮಗಳಿಗೆ ಒಂದಿಲ್ಲೊಂದು ಸಹಾಯ ಮಾಡುವುದು; ಆ ಮುಖಾಂತರ ತೊಂದರೆಗೊಳಗಾಗುವುದು: ನಂತರ ದೇವತೆಯ ಸ್ಥಾನಕ್ಕೇರುವುದು; ಅಲ್ಲದೆ ತುಳಜಾಪುರದ ಶಕ್ತಿದೇವತೆಯಾದ ಅಂಬಾಭವಾನಿಯೇ ಮತಂಗ ಎಂಬ ರಾಕ್ಷಸನನ್ನು ಕೊಲ್ಲಲು ಸ್ವತಃ ತಾನೇ ಮಾತಂಗಿಯ ರೂಪ ಧರಿಸುವುದು! ಮೂರನೆಯದಾಗಿ ರೇಣುಕೆಯ ತಲೆಸಿಗದಿದ್ದಾಗ ರೇಣುಕೆಯ ದೇಹಕ್ಕೆ ಆಕೆಯ ರುಂಡಹಚ್ಚಿ ಅದನ್ನೇ ದೇವತೆಯನ್ನಾಗಿ ಮಾರ್ಪಡಿಸುವುದು. ಈ ವಿಚಾರಗಳು ನಮಗೆ ಕಥೆಗಳ ಮುಖಾಂತರ ಸಿಗುತ್ತವೆ.

ಮಾತಂಗಿ ಬಗೆಗೆ ನಾವು ತಿಳಿದುಕೊಳ್ಳಲು ಪ್ರಯತ್ನಿಸಿದಾಗ ಮುಖ್ಯವಾಗಿ ನಮಗೆ

ಗೊತ್ತಾಗುವುದೇನೆಂದರೆ ಈಕೆ ಮೂರು ಗುಂಪುಗಳ ನಡುವೆ ನಡೆದ ಸಂಘರ್ಷ ಮತ್ತು ಸಮನ್ವಯದ ದೇವತೆಯಾಗಿ ಕಾಣಲ್ಪಡುತ್ತಾಳೆ. ಮೊದಲನೆಯದಾಗಿ ರೇಣುಕೆ ಸಂಸ್ಕೃತೀಕರಣ ಹೊಂದುವುದಕ್ಕಿಂತ ಮುನ್ನ ಇದ್ದ ರೂಪ ಎಲ್ಲಮ್ಮನದ್ದು. ಎಲ್ಲಮ್ಮನ ಪಂಥದವರು ಅಲೆಮಾರಿಗಳಾಗಿದ್ದು, ತಾವು ಆಹಾರವನ್ನು ಗಿಡ, ಮರಗಳಿಂದ, ಬಳ್ಳಿಗಳಿಂದ, ನೆಲಬಗೆದು, ಹೆಕ್ಕಿ ತೆಗೆದು ತಿನ್ನುತ್ತಿದ್ದರು. ತಮ್ಮ ಆಹಾರವನ್ನು ಸಂಗ್ರಹಿಸಲು ಅವರು ಒಂದು ಬುಟ್ಟಿಯನ್ನು ಬಳಸುತ್ತಿದ್ದು; ಅದರಲ್ಲಿ ತಮ್ಮ ದೇವತೆ ಎಂದು ಬೇವಿನಸೊಪ್ಪನ್ನು ಇಡುತ್ತಿದ್ದರು. ಆಹಾರವನ್ನು ಕಲೆ ಹಾಕಲು ಹೋಗುವಾಗ ಈ ದೇವತೆಯನ್ನು ತಮ್ಮ ಜೊತೆಗೆ ಕರೆದೊಯ್ದರೆ ಸುಲಭವಾಗಿ ಹಾಗೂ ಹೆಚ್ಚಾಗಿ ಸಿಗುತ್ತದೆ ಎಂಬುದು ಇವರ ನಂಬಿಕೆಯಾಗಿತ್ತು. ತಮಗೆ ಸಿಕ್ಕ ಎಲ್ಲಾ ಆಹಾರ ವಸ್ತುಗಳನ್ನು ಈ ಬುಟ್ಟಿಯಲ್ಲಿ ತಮ್ಮ ದೇವತೆಗೆ ಅರ್ಪಿತ ಎಂದು ಹಾಕಿ, ನಂತರ ಆಕೆಯ ಕೃಪೆ ಎಂದು ತಿನ್ನುತ್ತಿದ್ದರು (ಗುರುಮೂರ್ತಿ; ೧೯೯೧ : ೨೭೬). ಇದೇ ರೀತಿ ಮಾದಿಗರು ತಾವು ಮಾಡುವ ಕೆಲಸಕ್ಕೆ ಮುಖ್ಯವಾಗಿ ಬೇಕಾಗುವ ಚರ್ಮವನ್ನು ಹದ ಮಾಡುವ ಕರಿಬಾನಿಯನ್ನೇ ಮಾತಂಗಿ ಎಂದು ಆರೋಪಿಸಿರಬಹುದು. ತಮ್ಮಲ್ಲಿ ಮಾತೃಗೆ ಇರುವ ಸ್ಥಾನವನ್ನೇ ಕರಿಬಾನಿಗೆ ಕೊಟ್ಟು ತಮ್ಮೆಲ್ಲರ ತಾಯಿ ಎಂದು ಭಾವಿಸಿರಬಹುದು. ಎಲ್ಲಮ್ಮ ಮತ್ತು ಮಾತಂಗಿಯರನ್ನು ತಮ್ಮ ದೇವತೆಗಳನ್ನಾಗಿ ಮಾಡಿಕೊಂಡ ಎರಡು ಪಂಗಡಗಳು ಸಂಘರ್ಷಕ್ಕೆ ನಿಂತಿರಬಹುದು. ಕಾಲಾನಂತರದಲ್ಲಿ ಈ ಸಂಘರ್ಷ ಪರಸ್ಪರ ಕೂಡಿಬಾಳುವ ಹಂತಕ್ಕೆ ತಂದಾಗ ಅಂದರೆ ಎರಡೂ ಪಂಗಡಗಳು ರಾಜಿಗೊಳಪಟ್ಟು ತಮ್ಮ ಎರಡು ದೇವತೆಗಳನ್ನು ಒಂದಾಗಿ ಸಮೀಕರಿಸಿಕೊಂಡಿರಬಹುದು. ಇದಕ್ಕೆ ಸಾಕ್ಷಿಯಾಗಿ ಪರಶುರಾಮ ರೇಣುಕೆಯನ್ನು ಕೊಂದು ಮಾತಂಗಿಯ ರುಂಡವನ್ನು ರೇಣುಕೆಗೆ ಹಚ್ಚುವ ಕ್ರಿಯೆಯನ್ನೊಳಗೊಂಡಿರುವ ಕಥೆ ಮುಖ್ಯವಾದುದು. ಅಂದರೆ ಮಾತಂಗಿಯ ರುಂಡ ರೇಣುಕೆಯ ಮುಂಡಕ್ಕೆ ಅಂಟಿಕೊಂಡಿರುವುದೇ ಎರಡು ಗುಂಪುಗಳ ಸಮನ್ವಯಕ್ಕೆ ಸಾಕ್ಷಿಯಾಗಿದೆ. ಇಲ್ಲಿ ವಲಸೆಗಾರರು ಮೂಲ ಕೃಷಿಕರೆದುರು ಸೋತವರಾಗಿ ಕಂಡು ಬರುತ್ತಾರೆ. ಆದರೆ ವಲಸೆಗಾರರು ತಮ್ಮ 'ತಾಯಿಪಂಥ'ದ ಮರು ಹುಟ್ಟುವಿಕೆಗಾಗಿ ಮೂಲ ಕೃಷಿಕರ ದೈವವಾದ ಮಾತಂಗಿಯ ಜತೆ ಒಪ್ಪಂದ ಮಾಡಿಕೊಳ್ಳುವುದು ಅನಿವಾರ್ಯವಾಗಿರಬಹುದು. ಹೀಗೆ ಇದು ವಲಸೆಗಾರರು ಮತ್ತು ಕೃಷಿಕರ ಮಧ್ಯದ ಸಂಯೋಜನಾ ಜೀವನಕ್ಕೆ ಸಂಬಂಧಿಸಿದ ಕಥೆಯಾಗಿದೆ.

ಮತ್ತೊಂದು ಕಥೆಯಲ್ಲಿ ಬರುವ ಪರಶುರಾಮ ರೇಣುಕೆಯನ್ನು ಕೊಲ್ಲಲು ಹೋದಾಗ ರೇಣುಕೆ ಮಾದಿಗರು ಚರ್ಮ ಹದ ಮಾಡುವ ಕರಿಬಾನಿನಲ್ಲಿ ಉಳಿದಳು ಎಂಬುದು ಸಹ ಮೇಲಿನ ವಾದಕ್ಕೆ ಇನ್ನಷ್ಟು ಪುಷ್ಟಿಕೊಡುತ್ತದೆ. ಪರಶುರಾಮ ರೇಣುಕೆಯನ್ನು ಕೊಲ್ಲಲು ಹೋಗುವುದು ಎಂದರೆ ಮಾತೃವ್ಯವಸ್ಥೆಯನ್ನು ನಾಶಮಾಡಲು ಹೋಗುವುದಾಗಿದೆ. ಆಗ ರೇಣುಕೆಯ ಪಂಥದವರು ಮತ್ತು ಮಾತಂಗಿ ಪಂಥದವರು ಒಟ್ಟಾಗಿರಬೇಕು. ಒಟ್ಟಾಗುವುದರ ಸಂಕೇತವಾಗಿ ಮಾತಂಗಿ ಮತ್ತು ರೇಣುಕೆಯರ ಪರಸ್ಪರ ರುಂಡಮುಂಡಗಳ ಬದಲಾವಣೆಯಾಗಿದೆ. ಅಂದರೆ ಮಾತಂಗಿಗೆ ರೇಣುಕೆಯ ಪಂಗಡದವರು ದೇವತೆಯ ಪ್ರಾಶಸ್ತ್ಯವನ್ನು ಕೊಡುವುದಾಗಿದೆ. ಆದರೂ ಮಾದಿಗರು ತಮ್ಮ ಕರಿಬಾನಿಯನ್ನು ಈಗಲೂ ಹಬ್ಬಗಳಲ್ಲಿ ಹೆಂಡ, ಕೋಳಿ, ಮಾಂಸಗಳಿಂದ ಪೂಜಿಸುತ್ತಾರೆ.

ಇದು ಮಾತಂಗಿ ಮತ್ತು ರೇಣುಕೆಯರ ಸಂಬಂಧದ ಬಗೆಗಿರುವ ಸಾಧ್ಯತೆ.

ಮಾತಂಗಿ ಮತ್ತು ಎಲ್ಲಮ್ಮನ ಸಂಪ್ರದಾಯದ ಪಂಗಡಗಳು ಪರಸ್ಪರ ಸಂಘರ್ಷದ ನಂತರ ಸಾಮರಸ್ಯದಿಂದ ಜೀವನ ಸಾಗಿಸುತ್ತಿರಬಹುದು. ಆಗ ಅವರ ಜೀವನ ಕ್ರಮಗಳಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಅಂದರೆ ಪುರುಷ ಪ್ರಧಾನ ಸಂಪ್ರದಾಯದ ದಾಳಿ ನಡೆದಿರಬಹುದು. ಈ ದಾಳಿಯಲ್ಲಿ ಪಿತೃಪ್ರಧಾನ ವ್ಯವಸ್ಥೆ ತನ್ನ ಗಂಡು ದೇವರಿಗೆ ರೇಣುಕೆಯನ್ನು ಹೆಂಡತಿಯನ್ನಾಗಿ ಮಾಡಿಕೊಂಡು, ಮಾತಂಗಿಯ ಪ್ರತಿರೂಪವಾದ ಕರಿಬಾನಿಯ ನೀರನ್ನು ಪವಿತ್ರೀಕರಣಗೊಳಿಸಿ ರೇಣುಕೆ ಮತ್ತು ಮಾತಂಗಿಯರ ಗುಂಪುಗಳನ್ನು ಹತೋಟಿಗೊಳಪಡಿಸುವ ಪ್ರಯತ್ನ ನಡೆದಿರಬಹುದು. ರೇಣುಕೆಯನ್ನು ಹೆಂಡತಿಯನ್ನಾಗಿ ಮಾಡಿಕೊಂಡ ಸಂಪ್ರದಾಯ ಮಾತಂಗಿಯನ್ನು ಕೈಬಿಡಲು ಕಾರಣವೇನು ಎಂಬ ಪ್ರಶ್ನೆ ಏಳುತ್ತದೆ. ಬಹುಶಃ ಮಾದಿಗರು ವಲಸೆಗಾರರೊಂದಿಗೆ ಸಾಮರಸ್ಯದಿಂದ ಬಾಳುವಾಗ ರೇಣುಕೆಗೆ ಮಾತಂಗಿಯ ರುಂಡವನ್ನು ಹಚ್ಚಿದ ದೇವತೆಗಿಂತಲೂ ಕರಿಬಾನಿಯನ್ನೇ ಪವಿತ್ರವೆಂದು ಭಾವಿಸಿರಬಹುದು. ಹಾಗಾಗಿ ಕರಿಬಾನಿಯ ನೀರು ಪವಿತ್ರವಾಗಲು ಮುಖ್ಯ ಕಾರಣವಾಗಿರಬಹುದು. ಅಂದರೆ ಕೆಳಜಾತಿಗಳು ಯಾವುದನ್ನು ಪವಿತ್ರವೆಂದು ಭಾವಿಸುತ್ತವೆಯೋ ಆ ಪವಿತ್ರ ವಸ್ತುವಿನಿಂದಲೇ ಅವರನ್ನು ಹಿಮ್ಮೆಟ್ಟಿಸುವ ತಂತ್ರವಾಗಿದೆ. ಸಮನ್ವಯದ ಜೀವನ ನಡೆಸುತ್ತಿದ್ದಾಗಲೂ ಸಹ ಕೆಳಜಾತಿಗಳಿಂದ ತೊಂದರೆ, ವರ್ಣಸಂಕರ, ಜಾತಿವ್ಯವಸ್ಥೆಗಳಿಗೆ ಪೆಟ್ಟು ಬೀಳದಂತೆ ನೋಡಿಕೊಳ್ಳಲು ಮೇಲ್ಜಾತಿಗಳು ಬಹಳಷ್ಟು ಹುನ್ನಾರ ನಡೆಸಿವೆ. ಇದಕ್ಕೆ ಪ್ರಚಲಿತದಲ್ಲಿರುವ ಸವದತ್ತಿ ಎಲ್ಲಮ್ಮನ ಸಂಪ್ರದಾಯದಲ್ಲಿರುವ ಮಾತಂಗಿ ಗುಡಿಸಲು ಆಚರಣೆ ಮತ್ತು ಶಿರಸಿಯ ಶ್ರೀ ಮಾರಿಕಾಂಬೆ ದೇವಿಯ ಜಾತ್ರೆಯಲ್ಲಿ ವಧೆಯಾದ ಕೋಣನ ಮುಂಡವನ್ನು ಊರ ಹೊರಗೆ ಬೈಲಲ್ಲಿ ಒಗೆದು, ಕೋಣನ ರುಂಡವನ್ನು ಮಾತಂಗಿ ಚಪ್ಪರದಲ್ಲಿಟ್ಟು ಮಾತಂಗಿ ಚಪ್ಪರಕ್ಕೆ ಉರಿಯಿತ್ತ ಮೇಲೆ, ಮಾರಿಕಾಂಬೆಯ ಮೂರ್ತಿಯನ್ನು ಎತ್ತಿಕೊಂಡು ಹೋಗುವುದು. ಈ ಸಂಪ್ರದಾಯಗಳ ಹಿಂದಿರುವ ಆಶಯಗಳು ಒಂದು ದೇವಿ ಮಾದಿಗರ ಯುವಕನೊಂದಿಗೆ ಸಂಸಾರ ಮಾಡುವುದು, ಮತ್ತೊಂದು ಅವನನ್ನು ವಧಿಸಿ ಇಡೀ ಜನಾಂಗಕ್ಕೆ ಬೆದರಿಕೆಯನ್ನು ಒಡ್ಡುವುದಾಗಿದೆ. ಜೊತೆಗೆ ಇದು ಮೇಲ್ಜಾತಿ ಸ್ತ್ರೀ ಕೆಳಜಾತಿ ಗಂಡಿನೊಂದಿಗೆ ಸೇರಿದಾಗ ಹೊಲತಿಯಾಗುವಳು ಎಂಬ ಭಾವನೆಯನ್ನು ವ್ಯಕ್ತಪಡಿಸುತ್ತದೆ. ಇವೆಲ್ಲವೂ ಮೇಲ್ಜಾತಿಯ ಮನಸ್ಸಿನ ಕನ್ನಡಿಗಳಾಗಿವೆ. ಜೊತೆಗೆ "ಮಾರಮ್ಮನ ಬಗೆಗಿರುವ ಕಥೆಗಳು ವರ್ಣಸಂಕರ ಏರ್ಪಡಬಾರದೆಂದು, ಅನುಲೋಮ ವಿವಾಹಗಳಿಗೆ ನಿರೋಧಕವಾಗಿ ಚಾಲ್ತಿಗೊಳಿಸಲ್ಪಟ್ಟು, ಅಂದರೆ ಶಿಕ್ಷೆಯ ಸಂಕೇತವಾಗಿ ಕಥೆಯೂ, ನಿರೋಧನೆಯ ಸಂಕೇತವಾಗಿ ದೇವತೆಯೂ ಇವೆ. ಅಂದರೆ ಇವು ಯಾವುದಾದರೂ ಬುಡಕಟ್ಟು ಅಥವಾ ಕೆಳಜಾತಿಯವನನ್ನು ಸಂಹರಿಸಿದ ದೇವತೆಗಳು. ಕೆಳಜಾತಿಗಳವರ ಕ್ಷುದ್ರ ದೇವತೆಗಳನ್ನೇ ಬೆದರಿಕೆಯ ಸಾಧನವಾಗಿ ಬಳಸಿ ತಮಗೆ ಇಚ್ಛೆಯಿಲ್ಲದ ವರ್ಣಸಂಕರವನ್ನು ನಿಷೇಧಿಸುವ ಕುಟಿಲತೆಯನ್ನು ಪುರೋಹಿತಶಾಹಿ ನಡೆಸಿದೆ. ಶೂದ್ರರ ದೇವತೆಗಳನ್ನೇ ಬೆದರಿಕೆಯ ಸಾಧನವಾಗಿ ಬಳಸಿ ಸಂಬಂಧಪಟ್ಟ ಜನಾಂಗಗಳನ್ನು ಅಂಕೆಗೊಳಪಡಿಸಿದ್ದು ಚರಿತ್ರೆಯುದ್ದಕ್ಕೂ ನಡೆದುಬಂದಿದೆ. ಇದಕ್ಕೆ

ಒಂದು ಉದಾಹರಣೆಯನ್ನು ನಾವು ಇಲ್ಲಿ ಕೊಡಬಹುದು. ಧರ್ಮಸ್ಥಳದ ಅಣ್ಣಪ್ಪಸ್ವಾಮಿ, ಈತ ಶಿಕ್ಷೆಯ ದೇವರು. ಮುಖ್ಯವಾಗಿ ಈತ ಕೆಳಜಾತಿಗಳಿಂದ ಪೂಜಿಸಲ್ಪಡುತ್ತಾನೆ. ಗೇಣಿ ಕೊಡದ ಮತ್ತು ಧನಿಯರ ವಿರುದ್ಧ ಮೋಸಮಾಡಿದ ರೈತರನ್ನು ರಕ್ತಕಾರಿಕೊಂಡು ಸಾಯುವಂತೆ ಮಾಡುವುದು ಈತನ ಘನಕಾರ್ಯ. ಈ ನಂಬಿಕೆಯನ್ನು ಇಂತಹ ಶುದ್ಧಾಂಗ ಸುಳ್ಳನ್ನು ಪುರೋಹಿತಶಾಹಿಯೇ ಹೆಚ್ಚಿನ ಪ್ರಚಾರಕ್ಕೊಳಪಡಿಸಿದೆ. ಏಕೆಂದರೆ ಭೂಮಾಲೀಕರಾದವರಿಗೆ ಹೆಚ್ಚಿನ ಮೈನೋವಿಲ್ಲದೆ ಗೇಣಿದಾರರನ್ನು ನಿಯಂತ್ರಿಸುವ ಅಸ್ತ್ರವೊಂದು ಬೇಕಿತ್ತು. ಈತ ಕೆಳಜಾತಿಗಳ ನಡುವೆ ತುಂಬಾ ಖ್ಯಾತನಾದ ಗಣವಾಗಿದ್ದಿರಬಹುದು. ಆ ಗಣದ ಮೇಲೆ ಮಂಜುನಾಥನ ಆಧಿಪತ್ಯವೆಂಬುದು ಅಲ್ಲಿನ ಬುಡಕಟ್ಟುಗಳ ಮೇಲೆ ಊಳಿಗ ಮಾನ್ಯ ವ್ಯವಸ್ಥೆಯ ಗೆಲುವನ್ನು ಸಾಂಕೇತಿಸುತ್ತದೆ. ತಮ್ಮ ಗಣವೇ ಅಡಿಯಾಳಾದ ಮೇಲೆ ಅವರ ಆರಾಧಕರು ಸಹಜವಾಗಿ ಶ್ರೀಮಂತ ಜಾತಿಗಳ ದೇವರಾದ ಮಂಜುನಾಥನ ಭಕ್ತರಾಗಬೇಕು. ಅಥವಾ ಈ ಅಣ್ಣಪ್ಪಸ್ವಾಮಿ ಇನ್ನೊಮ್ಮೆ ಯಾವಾಗಲೋ ಭೂಮಾಲೀಕರ ವಿರುದ್ಧ ರೈತ ದಂಗೆ ನಡೆದಾಗ ಅವರನ್ನು ನಿಯಂತ್ರಿಸುವುದಕ್ಕಾಗಿ ಭೂಮಾಲೀಕರಿಂದ ನಿಯೋಜಿಸಲ್ಪಟ್ಟ ಗೂಂಡಾ ಶಕ್ತಿಯೂ ಇರಬಹುದು. ಆ ಐತಿಹಾಸಿಕ ವ್ಯಕ್ತಿಯೇ ಐತಿಹ್ಯವಾಗಿ, ಕಟ್ಟುಕಥೆಯಾಗಿ, ದೇವರಾಗಿ ಇತರ ಎಲ್ಲಾ ಭೂತಗಳ ಹಣೆ ಬರಹದಂತೆಯೇ ಇವನು ದೇವರಾಗಿ ನೆಲೆ ನಿಂತಿರಬಹುದು. ಚರಿತ್ರೆಯುದ್ದಕ್ಕೂ ಹೀಗೆ ಕೆಳಜಾತಿಗಳ ದೇವತೆಗಳನ್ನು, ಅವರನ್ನೇ ಅಂಕೆಯಲ್ಲಿಡುವುದಕ್ಕಾಗಿ ತಮ್ಮ ವರ್ಗ ಹಿತಾಶಕ್ತಿಗಾಗಿ ಪುರೋಹಿತಶಾಹಿ ದುಡಿಸಿಕೊಂಡಿರುವ ಅಮಾನುಷತೆಯ ಕುಟಿಲತೆಯನ್ನು ಕಾಣಬಹುದು" (ಬೇವಿನಕಟ್ಟೆ; ೧೯೯೪ : ೯ - ೧೦).

ಮಾದಿಗರು ಮಾತಂಗಿಯನ್ನು ತಮ್ಮ ದೈವವೆಂದು ತಿಳಿದು ಆರಾಧಿಸುವರಷ್ಟೆ. ರೇಣುಕೆಯ ಜೊತೆ ಮಾತಂಗಿಯನ್ನು ದೈವವೆಂದು ಪುರುಷಪ್ರಧಾನ ಸಮಾಜ ಒಪ್ಪಿದ್ದರೂ ಸಹ ಅಲ್ಲಲ್ಲಿ ಆಕೆಯನ್ನು ಕೀಳಾಗಿ ಕಂಡಿರುವ ಉದಾಹರಣೆಗಳು ನಮಗೆ ದೊರೆಯುತ್ತವೆ. ಮಾತಂಗಿಯನ್ನು ದೈವ ಎಂದು ತಿಳಿಯದೆ ಒಂದು ವಿದ್ಯೆ ಎಂದು ಕರೆದಿರುವುದುಂಟು. ಹಾಗೆಯೇ ಜಿನಮುನಿಗಳನ್ನು ಹಳಿದ ಕಾರಣವಾಗಿ ಮಾತಂಗಿಯಾಗಿ ಹುಟ್ಟುವಳು ಎಂದು ಸಾಹಿತ್ಯ ಕೃತಿಗಳಲ್ಲಿ ಪ್ರಕಟವಾಗಿರುವುದುಂಟು.

ಚಾವುಂಡರಾಯ ವಿರಚಿತ 'ತ್ರಿಷಷ್ಠಿ ಶಲಾಕಾ ಪುರುಷ ಪುರಾಣ' ಕೃತಿಯಲ್ಲಿ ಮಾತಂಗಿ ಒಂದು ವಿದ್ಯೆಯಾಗಿ ವರ್ಣಿತವಾಗಿದೆ. ಕೃತಿಯಲ್ಲಿ 'ವಿದ್ಯೆಗಳ ಬಗ್ಗೆ ಹೇಳುವಾಗ ಪ್ರಜ್ಞಪ್ತಿ, ಕಾಮರೂಪಿಣಿ, ಅಗ್ನಿಸ್ಥಂಭಿನಿ, ಉದಕಸ್ಥಂಭಿನಿ, ವಿಶ್ವಪ್ರವೇಶಿಸಿ, ಅಪ್ರತಿಘಾತ ಗಾಮಿನಿ, ಆಕಾಶಗಾಮಿನಿ, ಉತ್ಪಾದಿನೀ, ವಶೀಕರಿಣಿ, ಆವೇಶಿನಿ, ಪ್ರಸ್ಥಾಪಿನಿ, ಪ್ರಮೋಹಿನಿ, ಪ್ರಹರಣಿ, ಗಿರಿಕ್ರಮಣಿ, ಆವರ್ತನಿ, ಸಂಗ್ರಹಣಿ, ಭಂಜನಿ, ವಿಪಾಟಗಿ, ಪ್ರವರ್ತನಿ, ಪ್ರಕಾಶಗಿ (ಪ್ರರೇಚನಿ). ಪ್ರಹಾಪಣಿ, ಪ್ರಭಾವಣಿ, ಪ್ರಲಾಪನಿ, ನಿಕ್ಷೇಪಣಿ, ಶಬರಿ, ಚಾಂಪಾಲಿ, ಮಾತಂಗಿ, ಗೌರಿ, ಖಟ್ವಾಂಗಿನಿ, ಶ್ರೀಮುದ್ಗನಿ, ಶತಸಂಕುಲಾ, ಚಂಡವೇಶಿ, ಪರ್ಣಲಘು, ವೇಶಾವತಿ, ಶೇತವೇತಾಳಿ,

ಉಷ್ಣವೇತಾಳಿ, ಸರ್ವವಿದ್ಯಚ್ಛೇದಿನಿ ವಹಾಶ್ವಾಳಿನಿ, ಯುದ್ಧವೀರ್ಯೆ, ಬಂಧವೇಚಗಿ, ಪ್ರಹರಣಾವರಣೆ, ಭ್ರಾಮರಿ, ಅಭೋಗಿನಿಯೆಂಬುವು ಮೊದಲಿಗೆ ಕುಲವಿದ್ಯೆ, ಜಾತಿವಿದ್ಯೆ ಸಾದಿಪ್ರ ವಿದ್ಯೆಯ್ರೆ ಸಂಪನ್ನನಾಗಿದ್ದ ಎಂದು ಅಮಿತತೇಜನ ಬಗ್ಗೆ ಹೇಳುವಾಗ ಮಾತಂಗಿ ಒಂದು ವಿದ್ಯೆಯಾಗಿ ಬರುತ್ತದೆ" (ಬಿ. ಎಸ್. ಕುಲಕರ್ಣಿ; ೧೯೭೫ : ೧೯೫ - ೧೯೬).

ಹಾಗೆಯೇ ಆದಿದೇವ ವಿರಚಿತ 'ಸುಕುಮಾರ ಚರಿತೆ' ಯಲ್ಲಿ ಮಾತಂಗಿ ಜಿನ ಮುನಿಗಳನ್ನು ಹಳಿದ ಕಾರಣವಾಗಿ ಮಾದಿಗನ ಮಗಳಾಗಿ ಹುಟ್ಟಿ ನಾನಾ ಕಷ್ಟಗಳನ್ನು ಎದುರಿಸಿರುವುದು ಕಂಡು ಬರುತ್ತದೆ.

"ನಳನೀಳನೆಂಬ ಮಾತಂಗನ ವಲ್ಲಭೇಗಳಿ ನೀಳಕೇಣಿ ಕೇಶನಿಗೆ
ತಳುವದೆ ಮಗಳಾದಳು" (ಪದ್ಯ ೪೨೩)

ಹೊಟ್ಟೆಗಿಲ್ಲದೆ ಹಸಿದ ಮಾತಂಗಿ

"ಒಂದು ದಿವಸದೊಳು ಹಸಿದಾ ಮಾತಂಗಿ ನಂದನವನಕೆ
ಬಂದವಳು ನಿಂದಿರೆ ನೇಜುಲೆ ಮರದಡಿಯೊಳು ಕೂಡೆ
ಬಂದ ಮಾತಂಗಿಯರೊಡನೆ " (ಪದ್ಯ ೪೨೫)

ವಾಯುಭೂತಿಯಾದ ಅವಳು ಸೂರ್ಯ ಮಿತ್ರರನ್ನು ನಿಂದಿಸಿದ ಕಾರಣಕ್ಕಾಗಿ ಚಾಂಡಾಲ ಕನ್ಯೆಯಾಗಿ ಹುಟ್ಟುತ್ತಾಳೆ.

ತನುವನಳಿದು ಮತ್ತೆ ಬಂದೀ ಪುರದೊಳು
ಜನಿಸಿದೆ ಶುನಿಯಾಗಿ ಮತ್ತೆ
ತನುವನು ಬಿಟ್ಟು ಮತ್ತೆಲ್ಲಿಯ ಮಗಳಾದೆ
ತನುಜೆನೀ ಮಾದಿಗಗೆ

ಹೀಗೆ ಹುಟ್ಟಿದ ಚಾಂಡಾಲ ಕನ್ಯೆ ಜಿನ ಮುನಿವರರ ಸಂಪರ್ಕದಿಂದ ಪಾಪ ಕಳೆದುಕೊಳ್ಳುತ್ತಾಳೆ" (ವೈ.ಸಿ. ಭಾನುಮತಿ; ೧೯೮೪ : ೪೭).

ಜನಪದರ ಚೌಡಿಕೆ ಕಾವ್ಯಗಳಲ್ಲೂ ಸಹ ಮಾತಂಗಿಯ ಬಗೆಗೆ ಕೀಳಾಗಿ ಹೇಳಿರುವುದುಂಟು. ಎಲ್ಲಮ್ಮನು 'ಓರ್ಗಲ್ ರುದ್ರ' ಎಂಬ ಕಾವ್ಯದ ಭಾಗದಲ್ಲಿ ಓರ್ಗಲ್ ರುದ್ರನನ್ನು ತನ್ನ ಭಕ್ತನನ್ನಾಗಿ ಮಾಡಿಕೊಳ್ಳಲು ಹೋಗುತ್ತಾಳೆ. ದಾರಿಯಲ್ಲಿ ಮಾತಂಗಿಯು ವಾಸವಾಗಿರುವ ಜಾಗದ ಹತ್ತಿರ ಹೋಗುವಳು. ಎಲ್ಲಮ್ಮ ತಾನು ಹೋಗುವ ಉದ್ದೇಶ ಹೇಳಿದಾಗ ಮಾತಂಗಿಯು ಅದಕ್ಕೆ ಪ್ರತಿಕ್ರಿಯೆಯಾಗಿ ತಾನೂ ಬರುತ್ತೇನೆಂದು ಹೇಳುತ್ತಾಳೆ. ತಕ್ಷಣವೇ ಎಲ್ಲಮ್ಮನು ಅವಳನ್ನು

ಬೈಯ್ದು "ನನ್ನ ಜೊತೆ ಬರ್ಬೇಡ" ಎನ್ನುತ್ತಾಳೆ.

ಅಕ್ಕ ಎಲ್ಲಿಗೋಗ್ತಾ ಇದ್ದೀಯ
ಬಾರೆ ಎಲ್ಲಮ್ಮ ।
ತಂಗಿ ಮಾತಂಗಿ
ಓರ್ಗಲ್ ರುದ್ರ ನನ್ನ ಬಾಳ ಬಯ್ಸಿದ್ದಾನಂತೆ
ನನ್ಹೆಂಡ್ತಿ ಮಾಡ್ಕೋತಾನಂತೆ
ಅವುನ್ನೆಣಾ ಕೆಚ್ಚುನ್ನ ನೋಡ್ಕೊಂಡು ಬತ್ತೀನಿ
ಅದ್ಕೆ ಮಾತಂಗಿ;
ಯಮ್ಮ ನಾನು ಬತ್ತೀನಿ ಕಾಣಮ್ಮ
ಬಾರೆ ಎಲ್ಲಮ್ಮ ।
ಹಂಗಂದ ಕೂಡ್ಲೆ ರೇಣುಕಾದೇವಿ
ಛಿ ಹಾದ್ರುಗಿತ್ತಿ ಹೆಣ್ಣೇ ಬಸ್ಬಿ
ನನ್ ಜೊತೇಲಿ ಬರ್ಬೇಡ
ಬರೋಂತ ಮುಂಡೇ ನೀನು ದಾರೀಲಿ ಸರಿಯಾಗ್ ಬರೊಲ್ಲ
ಮಧ್ಯುದಲ್ಲಿ ನನ್ ಕಣ್ಬಾಯ್ ಬಿಡುಸ್ಬುಡ್ತಿಯ
ನೀನು ಬರ್ಬೇಡ (ನಂ. ನಾರಾಯಣಗೌಡ; ೧೯೭೪ : ೧೪೩).

ಹೀಗೆ ಎಲ್ಲಮ್ಮನು ಸಹ ಮಾತಂಗಿಯ ಬಗೆಗೆ ಕೆಟ್ಟ ಭಾವನೆಯನ್ನು ಹೊಂದಿರುವುದನ್ನು ಕಾಣಬಹುದು.

ಇನ್ನು ಮಾತಂಗಿಯ ಸಂಪ್ರದಾಯವನ್ನು ಅಧ್ಯಯನಕ್ಕೊಳಪಡಿಸಿದಾಗ, ಆ ಸಂಪ್ರದಾಯದ ಹಿನ್ನೆಲೆಯಲ್ಲಿರುವ ನಂಬಿಕೆ, ಆಚರಣೆ, ವಿಧಿನಿಷೇಧಗಳು ಮತ್ತು ಸಂಪ್ರದಾಯಗಳನ್ನು ನೋಡಿದಾಗ ಆ ದೈವದ ವೈವಿಧ್ಯಮಯವಾದ ಚರಿತ್ರೆಗೆ ಸಾಕ್ಷಿಯಾಗಿವೆ. ಮಾತಂಗಿ ಮಾದಿಗರ ದೈವ (ಆದರೆ ಅಪವಾದವೆನ್ನುವಂತೆ ಚಂದ್ರಗುತ್ತಿಯಲ್ಲಿರುವ ಮಾತಂಗಿಯ ಪೂಜೆ ದೇವಾಂಗ ಜನಾಂಗದವರದ್ದಾಗಿದೆ). ಮದುವೆಯಾಗದ ಮಾದಿಗರ ಹುಡುಗಿಯಲ್ಲಿ ಮಾತಂಗಿಯನ್ನು ಆರೋಪಿಸುವುದು. ಹಬ್ಬದ ಸಂದರ್ಭದಲ್ಲಿ ಮಾತಂಗಿಯಾದವಳ ಉಗುಳು ಮೈಲಿಗೆಯನ್ನು ನಿವಾರಿಸುತ್ತದೆ ಎಂದು ಜನರು ನಂಬುವುದು. ಮಾತಂಗಿಯನ್ನು ಊರಮ್ಮನ ರೂಪದಲ್ಲಿ ಬ್ರಾಹ್ಮಣರಾದಿಯಾಗಿ ಎಲ್ಲ ಜಾತಿಯ ಜನಗಳು ಸ್ವೀಕರಿಸಿರುವುದು, ಎಲ್ಲಮ್ಮನ ಜೊತೆ ಸೇರಿಸಿ ಕತೆಕಟ್ಟಿ ಐತಿಹ್ಯಗಳನ್ನು ಸೃಷ್ಟಿಸಿ ವಿಧಿಯಾಚರಣೆಗಳನ್ನು ಬೆಳೆಸಿಕೊಂಡು ಬಂದಿರುವುದು; ಆಕೆಗೆ ಚಪ್ಪಲಿಯನ್ನು ಎಡೆಯಾಗಿ ಕೊಡುವುದು (ಬಹುಶಃ ಈ ಹಿನ್ನೆಲೆಯಲ್ಲಿ 'ಮಾದಿಗರ ದೇವತೆಗೆ ಮೆಚ್ಚೆಪೂಜೆ' ಎಂಬ ಗಾದೆ ಬಂದಿರಬಹುದು) ಮುಂತಾದವುಗಳನ್ನು ಮಾತಂಗಿಯ ಬಗೆಗೆ ಕಾಣಬಹುದು. ನಮಗಿಲ್ಲಿ ಪ್ರಸ್ತುತವಾಗುವುದೇನೆಂದರೆ, ಮಾದಿಗರ ದೇವತೆಗೆ ಮೇಲ್ಜಾತಿಯವರು

ಕೊಡುವ ಪ್ರಾಮುಖ್ಯತೆ. ಮತ್ತು ಅವಳ ರೂಪವೆಂದು ಭಾವಿಸುವ ಮಾದಿಗರು ಚರ್ಮ ನೆನೆ ಹಾಕುವ ಕರಿಬಾನಿಯ ನೀರನ್ನು ಪವಿತ್ರವೆಂದು ಉಪಯೋಗಿಸುವುದು ಚಿಂತನೆಗೆ ಒಳಪಡಿಸುವ ವಿಷಯಗಳಾಗಿವೆ.

ಮಾತಂಗಿ ಸಂಪ್ರದಾಯವಲ್ಲಿರುವ ಮಾದಿಗರ ಕರಿಬಾನಿಯ ನೀರನ್ನು ಮನೆಯ ಸುತ್ತಮುತ್ತ ಚೆಲ್ಲುವುದರ ಮುಖಾಂತರ, ಮಾದಿಗರು ಮನೆಯ ಮೇಲೆ ದಾಳಿ ಮಾಡದಂತೆ ಎಚ್ಚರಿಕೆಯ ಕ್ರಮವಾಗಿ ಅವರ ಕರಿಬಾನಿಯ ನೀರಿನಿಂದ ಪವಿತ್ರಗೊಳಿಸುವ ಉದ್ದೇಶವಾಗಿದೆ. ಅದೇ ರೀತಿ ಮದುವೆಯಲ್ಲಿ ಮದುಮಗಳ ಅಪಹರಣ ಮಾದಿಗರಿಂದ ನಡೆಯದಿರಲಿ ಎಂಬ ಉದ್ದೇಶ ವಿರಬಹುದು. ಆದರೆ ಆಳದಲ್ಲಿ ಅಡಗಿರುವ ಕೀಳು ಮನೋಭಾವನೆಯನ್ನು ಮಾತ್ರ ಬಿಟ್ಟುಕೊಡಲಿಲ್ಲ. ಉದಾಹರಣೆಗೆ: `ರಾತ್ರಿ ನೀರಡಿಕೆಯಾದಾಗ ನೀರು ಕುಡಿಯದೇ ಮಲಗಿದರೆ ನಮ್ಮ ಆತ್ಮ ಮಾದಿಗರ ಕರಿಬಾನಿನಲ್ಲಿ ನೀರು ಕುಡಿದು ಬರುತ್ತದೆ' ಎಂಬ ನಂಬಿಕೆಯನ್ನು ನೋಡಬಹುದು. ಅಲ್ಲದೆ ಕರಿಬಾನಿಯ ನೀರನ್ನು ಎಷ್ಟೇ ಪವಿತ್ರವೆಂದರೂ ಸಹ ಒಳಗಡೆ ತರದೆ ಮನೆಯ ಸುತ್ತಮುತ್ತ ಚೆಲ್ಲುವುದರ ಮುಖಾಂತರ ಅದರ ಬಗೆಗಿರುವ ಕೀಳು ಮನೋಭಾವನೆಯನ್ನು ವ್ಯಕ್ತ ಪಡಿಸುತ್ತಿದ್ದಾರೆ.

ದೇವತೆಗೆ ಚಪ್ಪಲಿ ಎಡೆ ಕೊಡುವುದನ್ನು ನೋಡಿದಾಗ, ಮೇಲ್ಜಾತಿಗಳಿಗೆ ಅಪವಿತ್ರ ವಾದವುಗಳು ಕೆಳಜಾತಿಗಳಲ್ಲಿ ಪವಿತ್ರವಾಗುವುದರ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆ ನಡೆದಿದೆ. ಹಾಗಾಗಿ ಮಾದಿಗರಿಗೆ ಚಪ್ಪಲಿ ಶ್ರೇಷ್ಠವಾಗಿದ್ದು ಅವುಗಳಿಂದಲೇ ಪೂಜೆ ಸಲ್ಲಿಸುತ್ತಾ ಬಂದಿರಬಹುದು. ಶ್ರೇಷ್ಠವೆನ್ನುವುದಕ್ಕೆ ಕಾರಣ ಈಗಲೂ ಮೇಲ್ಜಾತಿಯ ಮದುವೆಗಳಲ್ಲಿ ಮಾದಿಗರು ಚಪ್ಪಲಿಗಳನ್ನು ಪೂಜೆ ಮಾಡಿ ವಧು ವರರಿಗೆ ಧರಿಸಲು ಕೊಡುತ್ತಾರೆ. ಅಲ್ಲದೆ ಮೈಲಾರಲಿಂಗ ಮುಂತಾದ ದೇವರುಗಳಿಗೆ ಚಪ್ಪಲಿ ಮಾಡಿಕೊಡುವ ಸಂದರ್ಭದಲ್ಲೂ ಸಹ ಚಪ್ಪಲಿಗಳಿಗೆ ಪೂಜೆ ಸಲ್ಲಿಸುತ್ತಾರೆ. ಹಾಗಾಗಿ ಅವುಗಳಿಂದಲೇ ಪೂಜೆ ಸಲ್ಲಿಸುತ್ತಿರಬಹುದು. ಕಾಲಾನಂತರದಲ್ಲಿ ಹುಸಿ ಉನ್ನತ ಸಂಸ್ಕೃತಿ ಎಂದು ಕರೆದುಕೊಳ್ಳುವ ಸಂಸ್ಕೃತಿಯು `ಮಾದಿಗರ ದೇವತೆಗೆ ಮಚ್ಚೆಪೂಜೆ' ಎಂಬ ಗಾದೆಯನ್ನು ಸೃಷ್ಟಿಸಿರಬಹುದು. ಏಕೆಂದರೆ ತಾನು ಕೀಳಾಗಿ ಕಂಡ ವಸ್ತುವಿನಿಂದ ಪೂಜೆ ಮಾಡುತ್ತಿರುವುದನ್ನು ಲೇವಡಿ ಮಾಡಲು ಈ ರೀತಿಯಾಗಿ ಕರೆದಿರಬಹುದಾದ ಸಾಧ್ಯತೆ ಇದೆ. ಮಾತಂಗಿಯ ಬಗೆಗೆ ಇನ್ನೂ ಹೆಚ್ಚಿನ ಮಾಹಿತಿಗಳು ಲಭ್ಯವಾದಲ್ಲಿ ಇನ್ನೂ ಸ್ಪಷ್ಟವಾದ ಚಿತ್ರಣ ಕೊಡಬಹುದು.

## ೮. ಉಪಸಂಹಾರ:

ಪೂಜೆ ಎನ್ನುವುದು ಮೂಲ ಘಟಕಾಂಶವಾಗಿದ್ದು, ಇದನ್ನು ನಾವು ಈ ಸದ್ಯದ ಪರಿಶೀಲನೆಯಲ್ಲಿ ಆಚರಣೆ ಎಂದು ಕರೆಯೋಣ. ಪೂಜಿಸಲು ಬೇಕಾದ ದೈವ ಅವರ ಸಾಂಸ್ಕೃತಿಕ ಚರಿತ್ರೆಯಲ್ಲಿ ಮಹತ್ವವುಳ್ಳದ್ದಾಗಿರುತ್ತದೆ. ಹಾಗೆಯೇ ಆ ದೈವವು ಅವರ ಆರಾಧ್ಯ ದೈವವಾಗಿರುವುದುಂಟು. ಇದುವರೆಗೆ ಪರಿಶೀಲಿಸಿದ 'ಮಾತಂಗಿ' ಮಾದಿಗರ ಆರಾದ್ಯ ದೈವವಾಗಿದೆ. ಈ ಮಾತಂಗಿ ತನ್ನ ಬೆನ್ನಿಗೆ ದಟ್ಟವಾದ ನಂಬಿಕೆ, ಆಚರಣೆ ಮತ್ತು ಸಂಪ್ರದಾಯಗಳನ್ನು ಇಟ್ಟುಕೊಂಡಿದ್ದಾಳೆ. ಹಾಗೆಯೇ ಸಾಂಸ್ಕೃತಿಕ ಸಂಘರ್ಷ ಮತ್ತು ಸಮನ್ವಯದ ಹಿನ್ನೆಲೆಯಲ್ಲಿ ಮಹತ್ವವುಳ್ಳ ದೈವವಾಗಿದೆ. ಮಾದಿಗರು ತಮ್ಮ ಕುಲಕಸುಬಿಗೆ ಮುಖ್ಯವಾಗಿ ಬೇಕಾದ ಚರ್ಮ ಹದ ಮಾಡುವ ಬಾನಿಯನ್ನೇ ಮಾತಂಗಿಯೆಂದು ಕರೆಯುವರು. ಇತ್ತೀಚೆಗೆ ನಾಗರೀಕತೆ ಮತ್ತು ಚರ್ಮದ ಕೈಗಾರಿಕೆಯಲ್ಲಿ ವೈಜ್ಞಾನಿಕ ಪ್ರಗತಿ ಆದಂತೆಲ್ಲಾ ಮಾದಿಗರು ತಮ್ಮ ಕುಲಕಸುಬನ್ನು ಬಿಟ್ಟು ಬೇರೆ ಬೇರೆ ಉದ್ಯೋಗಗಳಿಗೆ ಹೋಗುತ್ತಿದ್ದಾರೆ. ಜೊತೆಗೆ ಬೇರೆ ಬೇರೆ ಪಟ್ಟಣಗಳಿಗೆ ವಲಸೆಹೋಗುತ್ತಾರೆ. ಹಾಗಾಗಿ ಮಾತಂಗಿ ಸಂಪ್ರದಾಯ ಕಡಿಮೆಯಾಗುತ್ತಿದೆ. ಆದರೆ ಇನ್ನೂ ಕೆಲವು ಗ್ರಾಮೀಣ ಪರಿಸರದಲ್ಲಿ ದಟ್ಟವಾಗಿ ಕಾಣುತ್ತಿದೆ. ಜೊತೆಗೆ ಮಾದಿಗರು ಆರ್ಥಿಕ ಮತ್ತು ಸಾಮಾಜಿಕವಾಗಿ ತುಂಬಾ ತುಳಿತಕ್ಕೊಳಗಾದವರು ಅವರಿಗೆ ಒದಗುವ ದುಃಸ್ಥಿತಿಯೇ ಆ ದೈವಕ್ಕೂ ಒದಗಿದೆ ಎಂಬುದನ್ನು ಶಂಕಿಸಬೇಕಾದ್ದಿಲ್ಲ.

## ೯. ಆಧಾರ ಗ್ರಂಥಗಳು:

೧. ಕಡೆತೋಟದ.ಎನ್.ಕೆ.; ೧೯೮೩. ಎಲ್ಲಮ್ಮನ ಜೋಗತಿಯರು. ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ.

೨. ಕವಲಿ.ಜೆ.ಎ.; ೧೯೮೯. ಸಚಿತ್ರ ಕನ್ನಡ - ಕನ್ನಡ ಕಸ್ತೂರಿಕೋಶ. ಧಾರವಾಡ, ರಾಮಾಶ್ರಯ ಬುಕ್ ಡಿಪೋ.

೩. ಕಿಟ್ಟೆಲ್.ಕೆ.; ೧೯೯೧. ಕನ್ನಡ ಇಂಗ್ಲೀಷ್ ಡಿಕ್ಸನರಿ. ಮದ್ರಾಸ್, ಏಷಿಯನ್ ಎಜುಕೇಷನಲ್ ಸರ್ವೀಸಸ್ .

೪. ಕುಲಕರ್ಣಿ.ಬಿ.ಎಸ್. (ಸಂ); ೧೯೭೫. ಚಾವುಂಡರಾಯ ವಿರಚಿತ 'ತ್ರಿಷಷ್ಠಿ ಶಲಾಕಾ ಪುರುಷ ಪುರಾಣ'. ಧಾರವಾಡ, ಕನ್ನಡ ಸಂಶೋಧನ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾಲಯ.

೫. ಗುರುಮೂರ್ತಿ.ಕೆ. ಜಿ.; ೧೯೯೧. ಶ್ರೀ ರೇಣುಕಾ ಎಲ್ಲಮ್ಮನ ಸಂಪ್ರದಾಯದಲ್ಲಿ ಸಾಂಕೇತಿಕತೆ. (ಸಂಶೋಧನ : ಸಂ : ಲಕ್ಷ್ಮಣ್ ತೆಲಗಾವಿ). ಬೆಂಗಳೂರು, ಡಾ. ಚಿದಾನಂದ ಮೂರ್ತಿ ಅಭಿನಂದನಾ ಸಮಿತಿ.

೬. ಗುರುನಾಥ ಜೋಷಿ; ೧೯೯೧. ಕನ್ನಡ - ಕನ್ನಡ ಶಬ್ದಕೋಶ. ಗದಗ, ಮೆ|| ಬಿ.ಜಿ.ಸಂಕೇಶ್ವರ ಆ್ಯಂಡ್ ಕಂಪನಿ.

೭. ಚಂದ್ರಶೇಖರ ಕಂಬಾರ (ಸಂ); ೧೯೮೫. ಕನ್ನಡ ಜಾನಪದ ವಿಶ್ವಕೋಶ (ಭಾಗ -೨). ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು.

೮. ನಾರಾಯಣಗೌಡ.ನಂ. (ಸಂ); ೧೯೭೪. ಚೌಡಿಕೆ ಕಾವ್ಯಗಳು. ಮೈಸೂರು, ಸಂಯುಕ್ತ ಪ್ರಕಾಶನ.

೯. ಬಸವರಾಜ ಸಬರದ; ೧೯೯೪. ಜನಪದ ದೇವತೆಗಳು ಮತ್ತು ಶಿಷ್ಟ ದೇವತೆಗಳು. ಕುಂದಾಪುರ, ಡಾ. ಗುಂಡ್ಮಿ ಚಂದ್ರಶೇಖರ ಐತಾಳ ಜಾನಪದ ಪ್ರಶಸ್ತಿ ಸಮಿತಿ.

೧೦. ಬಸವಾರಾಧ್ಯ.ಎನ್.; (ಸಂ) ೧೯೯೩. ಕನ್ನಡ ನಿಘಂಟು (ಸಂಪುಟ ೭). ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು.

೧೧. ಬುಚ್ಚರ್.ಜೆ.; ೧೯೯೧. ಕನ್ನಡ ಇಂಗ್ಲೀಷ್ ಡಿಕ್ಸನರಿ. ಮದ್ರಾಸ್, ಏಷಿಯನ್ ಎಜುಕೇಷನ್ ಸರ್ವೀಸಸ್ .

೧೨. ಬಾನುಮತಿ.ವೈ.ಸಿ. (ಸಂ); ೧೯೮೪. ಆದಿದೇವ ವಿರಚಿತ 'ಸುಕುಮಾರ ಚರಿತೆ'.ಮೈಸೂರು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

೧೩. ಮಂಜುನಾಥ ಬೇವಿನಕಟ್ಟಿ; ೧೯೯೪. 'ಮಲಿಯಮ್ಮ ನಿನ್ನಾಲ್ಕುದೋ....ಉಧೋ'. ಹೊಸಪೇಟೆ, ಅಂಬಿಕಾ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ .

೧೪. ರಾಜಗೋಪಾಲ.ಕ.ವೆಂ. ಮತ್ತು ಕೇಶವಭಟ್ಟ; ೧೯೭೦. 'ಕಾವ್ಯಪದಮಂಜರಿ' (ಕನ್ನಡ-ಕನ್ನಡ ನಿಘಂಟು). ಬೆಂಗಳೂರು, ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ ನಿಯಮಿತ.

೧೫. ರಾಮಚಂದ್ರರಾವ್.ಎಸ್.ಕೆ.; ೧೯೭೫. 'ಮೂರ್ತಿಶಿಲ್ಪ: ನೆಲೆ ಮತ್ತು ಹಿನ್ನೆಲೆ'. ಬೆಂಗಳೂರು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ.

೧೬. ಸಕೇತ.ಎಂ.ಬಿ.; ೧೯೮೭.'ದೇವದಾಸಿ ಸಂಪ್ರದಾಯದ ಪ್ರೇರಣೆಗಳು' (ಜಾನಪದ ಸಾಹಿತ್ಯ ದರ್ಶನ - ೧೧. ಸಂ: ಡಾ. ಎಂ. ಎಂ. ಕಲಬುರ್ಗಿ). ಧಾರವಾಡ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾನಿಲಯ.

೧೭. ಸಿದ್ಧಲಿಂಗಯ್ಯ; ೧೯೯೦. 'ಗ್ರಾಮದೇವತೆಗಳ ವರ್ಗೀಕರಣ' (ಜಾನಪದ ಸಾಹಿತ್ಯ ದರ್ಶನ - ೮. ಸಂ: ಡಾ. ಎಂ.ಬಿ. ಕೊಟ್ರಶೆಟ್ಟಿ). ಧಾರವಾಡ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾನಿಲಯ.

೧೮. ಹನುಮಂತಪ್ಪ ಬಳ್ಳೇಕೆರೆ; ೧೯೮೮. 'ಚಂದ್ರಗುತ್ತಿ ಎಲ್ಲಮ್ಮನ ಜಾತ್ರೆ' (ಕರ್ನಾಟಕ ಜಾತ್ರೆಗಳು: ಸಂ:ಸಿ. ಎಸ್ . ಶಿವಕುಮಾರ್ ) ಬಿ. ಆರ್ . ಪ್ರಾಜೆಕ್ಟ್ , ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ.

೧೯. ಹಿರೇಮಠ.ಆರ್.ಎಸ್.; ೧೯೮೭.'ಎಲ್ಲಮ್ಮ ಪ್ರಾದೇಶಿಕ ವ್ಯಾಪ್ತಿ ಮತ್ತು ಪ್ರಭಾವ' (ಜಾನಪದ ಸಾಹಿತ್ಯ ದರ್ಶನ - ೧೧. ಸಂ: ಡಾ. ಎಂ. ಎಂ. ಕಲಬುರ್ಗಿ) ಧಾರವಾಡ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ.

೨೦. ಹುಲ್ಲೂರು ಶ್ರೀನಿವಾಸ ಜೋಯಿಸ; ೧೯೯೫.'ಶ್ರೀ ಉತ್ಸವಾಂಬ' (ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು: ಸಂ: ಪ್ರೊ. ಲಕ್ಷ್ಮಣ್ ತೆಲಗಾವಿ. ಡಾ. ಎಂ. ವಿ. ಶ್ರೀನಿವಾಸ). ಚಿತ್ರದುರ್ಗ, ಹುಲ್ಲೂರು ಶ್ರೀನಿವಾಸ ಜೋಯಿಸ ಗ್ರಂಥ ಪ್ರಕಟಣಾ ಸಮಿತಿ.

# ಮಂಟಪಮಾಲೆ

## ೨೫

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕ ವಾಗುವವೆಂಬ ನಂಬಿಕೆಯಿಂದ ಕಡಿಮೆ ಬೆಲೆಯ ಕಿರು ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

ಡಾ. ಚಂದ್ರಶೇಖರ ಕಂಬಾರ
ಕುಲಪತಿಯವರು

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ